# ಮಿರ್ಜಿ ಅಣ್ಣಾರಾಯ

## (ವ್ಯಕ್ತಿ ಮತ್ತು ಸಾಹಿತ್ಯ)

ಡಿ. ಪುಟ್ಟಸ್ವಾಮಿ, ಬಿ.ಎ., ಬಿ.ಎಲ್., ಮಂಗಳೂರು.
ಟಿ. ಕೆ. ಪಾಟೀಲ, ಬಿ.ಎ., ಬಿ.ಟಿ., ಜಮಖಂಡಿ.

# ಮಿರ್ಜಿ ಅಣ್ಣಾರಾಯ

(ವ್ಯಕ್ತಿ ಮತ್ತು ಸಾಹಿತ್ಯ)

ಸಂಪಾದಕರು:

ಡಿ. ಪುಟ್ಟಸ್ವಾಮಿ, ಬಿ.ಎ., ಬಿ.ಎಲ್., ಮಂಗಳೂರು.

ಟಿ. ಕೆ. ಪಾಟೀಲ, ಬಿ.ಎ., ಬಿ.ಟಿ., ಜಮಖಂಡಿ.

## ಸಂಪಾದಕರಿಂದ —

ಒಂದು ವಿಷಯದ ವ್ಯಾಸಂಗದಲ್ಲಿ ಸುಮಾರು ಹನ್ನೆರಡು ವರ್ಷಗಳಷ್ಟು ಸತತ ಸಾಧನೆಯನ್ನು ಮಾಡಿದಾಗ ಆ ಅವಧಿಗೆ ಒಂದು 'ತಪ' ಎಂದು ಹೇಳುವದುಂಟು. ಇಂಥ ತಪ ಒಂದನ್ನು ಸಾಹಿತ್ಯೋಪಾಸನೆಯಲ್ಲಿ ಶ್ರೀ ಮಿರ್ಜಿ ಅಣ್ಣಾರಾಯರು ಸವೆಯಿಸಿದ್ದಾರೆ. ಅವರ ಈ ಸಾಧನೆಯಲ್ಲಿ ಏಳು-ಬೀಳುಗಳಿರಬಹುದು; ತಪ್ಪು-ಒಪ್ಪುಗಳಿರಬಹುದು. ಆದರೆ ಅವರು ಸಾಧಕರಾಗಿ ಸಂತತ ಮುಂದರಿದ ಮಾರ್ಗದ ನಿರೀಕ್ಷಣೆಯೇ ಇಲ್ಲಿ ಮುಖ್ಯವಾಗಿದೆ. ಅದರೊಡನೆಯೇ ಸಾರ್ವಜನಿಕರಿಂದ ಇವರ ಸಾಹಿತ್ಯಕ್ಕೆ ಲಭಿಸಿದ ಸ್ವಾಗತದ ದಿಗ್ದರ್ಶನವೂ ಇದರಿಂದಾಗುವುದು.

ಇಲ್ಲಿ ಮಿರ್ಜಿಯವರ ವ್ಯಕ್ತಿತ್ವ ಹಾಗು ಸಾಹಿತ್ಯವನ್ನು ಕುರಿತು ಕೆಲವು ಲೇಖನಗಳನ್ನು ಸಂಪಾದಿಸಿ ಕೊಡಲಾಗಿದೆ. ಈ ಲೇಖನಗಳಲ್ಲಿ ಕೆಲವು ಆಗಾಗ ಕನ್ನಡನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾದವುಗಳಿವೆ. ಇನ್ನುಳಿದವುಗಳನ್ನು ಅವರ ಹತ್ತಿರದ ಸ್ನೇಹಿತರಿಂದ ಈ ಪ್ರಕಟಣೆಗಾಗಿಯೇ ಬರೆಯಿಸಿಕೊಳ್ಳಲಾಗಿದೆ. ಹೀಗಾಗಿ, ಈ ಗ್ರಂಥವು ಅಣ್ಣಾರಾಯರ ಸಮಗ್ರ ಸಾಹಿತ್ಯವನ್ನು, ಅವರ ವ್ಯಕ್ತಿತ್ವವನ್ನು ಅರಿತುಕೊಂಡು ಅಭ್ಯಸಿಸಲು—ಅವಲೋಕಿಸಲು—ಕೈಪಿಡಿಯಂತಿದೆ.

ಈ ಗ್ರಂಥದ ಪ್ರಕಾಶನಕ್ಕೆ ಸಹಕಾರ ನೀಡಿದ ಸಹೃದಯಿಗಳಾದ ಎಲ್ಲ ಲೇಖಕರಿಗೂ ಪತ್ರಿಕೆಗಳ ಸಂಪಾದಕರಿಗೂ ನಾವು ಹೃತ್ಪೂರ್ವಕವಾಗಿ ವಂದನೆಗಳನ್ನು ಅರ್ಪಿಸುತ್ತೇವೆ. ಈ ನಮ್ಮ ಪ್ರಯತ್ನವನ್ನು ಕನ್ನಡ ಸಾಹಿತ್ಯಾಭ್ಯಾಸಿಗಳು ಸ್ವಾಗತಿಸುವರೆಂದು ಹಾರೈಸಿದ್ದೇವೆ.

—ಸಂಪಾದಕರು.

卐

# ಅಣ್ಣಪ್ಪ ಅಪ್ಪಣ್ಣ ಮಿರ್ಜಿ

ಇವರು ಬೆಳಗಾಂವಿ ಜಿಲ್ಹೆಯ ಸೇಡಬಾಳದಲ್ಲಿ ೨೫ ಅಗಸ್ಟ ೧೯೧೮ ರಂದು ಜನಿಸಿದರು. ಪ್ರಾಥಮಿಕ ಶಿಕ್ಷಣವು ಅಲ್ಲಿಯೇ ಆಯಿತು. ಮನೆಯಲ್ಲಿಯೇ ಅಭ್ಯಾಸವನ್ನು ಮಾಡಿ, ಕನ್ನಡ ಸಾಹಿತ್ಯ ಪರಿಷತ್ತಿನ 'ಜಾಣ'ರಾದರು. ೧೯೩೯ರಿಂದ ಪ್ರಾಥಮಿಕ ಶಿಕ್ಷಕರೆಂದು ಕೆಲಸಕ್ಕೆ ಸೇರಿದರು. ಅಂದಿನಿಂದ ಇವರ ಬರವಣಿಗೆಯೂ ಆರಂಭವಾಯಿತು. ಮಿರ್ಜಿ ಅಣ್ಣಾರಾಯ, 'ಇಂದುತನಯ' ಎಂಬ ಹೆಸರುಗಳಿಂದ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುತ್ತಿದರು. ೧೯೪೫ರಲ್ಲಿ ಇವರ 'ನಿಸರ್ಗ'ವೆಂಬ ಮೊದಲನೆಯ ಕಾದಂಬರಿಯು ಪ್ರಕಟವಾಯಿತು. ೧೯೪೮ರಲ್ಲಿ ಧಾರವಾಡ ಶಿಕ್ಷಕರ ಟ್ರೇನಿಂಗ ಕಾಲೇಜಿನ ಎರಡನೆಯ ವರ್ಷದ ಪರೀಕ್ಷೆಯಲ್ಲಿ ಮೊದಲನೆಯ ತರಗತಿಯಲ್ಲಿ ತೇರ್ಗಡೆ ಹೊಂದಿದರು. ಮೇಲಾಗಿ ಗಣಿತ, ವಿಜ್ಞಾನ, ಕನ್ನಡ ಭಾಷೆಗಳಲ್ಲಿ ಹೆಚ್ಚಿಗೆ ಗುಣಗಳನ್ನು ಸಂಪಾದಿಸಿ, ಮೂರು ಬಹುಮಾನಗಳನ್ನು ಪಡೆದರು. ಒಳ್ಳೆಯ ಶಿಕ್ಷಕರೆಂದು ಹೆಸರನ್ನು ಗಳಿಸಿದರು. ಉಗಾರದ ಮೂಲಶಿಕ್ಷಣ ಶಾಲೆಯಲ್ಲಿ ಏಳು ವರ್ಷ ಕೆಲಸ ಮಾಡಿದರು. ೧೯೫೩ರಲ್ಲಿ 'ಮ್ಯಾಟ್ರಿಕ್' ಪರೀಕ್ಷೆಯಲ್ಲಿಯೂ ಮೇಲ್ತರಗತಿಯಲ್ಲಿ ತೇರ್ಗಡೆ ಹೊಂದಿದರು. ಈಗ ೧೯೫೫ರಿಂದ ಸೇಡಬಾಳ ಜೀವನ ಶಿಕ್ಷಣ ಶಾಲೆಯಲ್ಲಿ ಶಿಕ್ಷಕರಾಗಿದ್ದಾರೆ. 'ಶಾಂತಿಸೇವಾಸದನ', 'ಸನ್ಮತಿ ವಿದ್ಯಾಲಯ', 'ಸನ್ಮತಿ' ಮಾಸಿಕಗಳ ಸಂಸ್ಥಾಪಕರಲ್ಲಿ ಪ್ರಮುಖರಾಗಿದ್ದಾರೆ.

# ಪರಿವಿಡಿ


**೧. ವ್ಯಕ್ತಿತ್ವ:** ಪುಟ

(೧) ಸುಪ್ರಸಿದ್ಧ ಕನ್ನಡ ಸಾಹಿತ್ಯಿಕ ಶ್ರೀ ಮಿರ್ಜಿ ಅಣ್ಣಾರಾಯ ೧
ಶ್ರೀ ದಿನಕರ ರಾಮಚಂದ್ರ ಘೋರಪಡೆ,
ಬಿ ಎ, ಬಿ ಟಿ, ಮಿರಜ.

(೨) ಪ್ರಥಿತಯಶ ಕಾದಂಬರಿಕಾರ ಶ್ರೀ ಅಣ್ಣಾರಾಯ ಮಿರ್ಜಿ ೯
ಡಾ ವಿಲಾಸ ಆದಿನಾಥ ಸಂಗವೆ,
ಎಂ ಎ, ಪಿಎಚ್ ಡಿ, ಕೊಲ್ಹಾಪುರ.

(೩) ಪ್ರತಿಭೆಯ ಪ್ರಭೆಯಲ್ಲಿ: ಅಣ್ಣಾರಾಯರು . . ೧೪
ಅಖಿಲ ಭಾರತ ಬಾನುಲಿಯ ಸಂದರ್ಶಕರಿಂದ.

(೪) ಆಧುನಿಕ ರತ್ನತ್ರಯರು . . . . ೨೩
ಶ್ರೀ ಜಿ ಬ್ರಹ್ಮಪ್ಪ, ಎಂ ಎ., ಶಿವಮೊಗ್ಗ.

(೫) ಅಣ್ಣಾರಾಯರು ಮತ್ತು 'ನಿಸರ್ಗ' . . . ೨೭
ಶ್ರೀ ನಿರಂಜನ, ಮೈಸೂರು

**೨. ಕಾದಂಬರಿಗಳು:**

(೬) ರಸವಿಮರ್ಶೆಯಲ್ಲಿ 'ನಿಸರ್ಗ' . . . ೩೪
ಡಾ ಹಿರೇಮಲ್ಲೂರ ಈಶ್ವರನ್, ಎಂ ಎ,
ಪಿಎಚ್ ಡಿ, (ಕರ್ನಾಟಕ) ಬಿ ಲಿಟ್. ಆಕ್ಸಫರ್ಡ

(೭) ಸ್ವಾತಂತ್ರ್ಯ ಹೋರಾಟದ ಚಿತ್ರ: 'ರಾಷ್ಟ್ರಪುರುಷ' . ೪೦
ಶ್ರೀ. ಸಿ. ಎಸ್ ಮಂಗಸೂಳಿ, ಬಿ ಎ, ಎಲ್ಎಲ್.ಬಿ., ಅಥಣಿ.

(೮) ಅಣ್ಣಾರಾಯರ 'ಅಶೋಕ ಚಕ್ರ' . . . ೪೮
ಶ್ರೀ ನಿ ವ್ಯಾ ಬ ಮುಂಬೈ

(೯) ಚಿಕ್ಕ ಮಹಾಕಾವ್ಯ: 'ರಾಮಣ್ಣ ಮಾಸ್ತರು' . ೫೪
ಪ್ರೊ. ಸ ಸ. ಮಾಳವಾಡ, ಎಂ.ಎ, ಧಾರವಾಡ

(೧೦) ಮಿರ್ಜಿಯವರ ಮೂರು ಕಾದಂಬರಿಗಳು . . ೫೮
ಶ್ರೀ. ಟಿ. ಕೆ. ಪಾಟೀಲ, ಬಿ ಎ, ಬಿ.ಟಿ, ಜಮಖಂಡಿ.

(೧೧) 'ಶ್ರೇಯಾಂಸ' . . . . . . ೬೩
ಶ್ರೀ. ಜಿ ಬ್ರಹ್ಮಪ್ಪ, ಎಂ.ಎ., ಶಿವಮೊಗ್ಗ

**೩. ಕಥೆ ಹಾಗು ವ್ಯಕ್ತಿಚಿತ್ರಗಳು:**

(೧೨) ಅಣ್ಣಾರಾಯರ ಸಣ್ಣಕಥೆಗಳು . . . ೬೯
ಶ್ರೀ. ಜಾಧವ ರಾಮರಾಯರು, ಎಂ.ಎ. (ಆನರ್ಸ), ಅಂಕಲಗಿ.

(೧೩) 'ಬುದ್ಧನ ಕಥೆ'ಯ ಸಮೀಕ್ಷೆ . . . ೭೬
ಶ್ರೀ. ಕೆ. ಟಿ ದೇಶಪಾಂಡೆ, ಎಂ.ಎ , ಜಮಖಂಡಿ.
(೧೪) 'ಭಾರತದ ಬೆಳಕಿ'ನಲ್ಲಿ . . . . ೭೯
ಶ್ರೀ ಮಾ ವರ್ಧಮಾನ ಹೆಗ್ಗಡೆ, ಧರ್ಮಸ್ಥಳ.
(೧೫) ಮಹಮ್ಮದ ಪೈಗಂಬರರು . . . . ೮೨
ಶ್ರೀ ಪಿ ಕೆ ನಾರಾಯಣ, ವಿದ್ವಾನ್, ಮಂಗಳೂರು
(೧೬) ಅಪೂರ್ವ ಗ್ರಂಥ: 'ಮಹಾಪುರುಷ' . . ೮೯
ಶ್ರೀ ಜಿ ಬ್ರಹ್ಮಪ್ಪ, ಎಂ ಎ , ಶಿವಮೊಗ್ಗ

**೪. ಗ್ರಂಥ ಸಂಪಾದನೆ ಮತ್ತು ಸಂಶೋಧನೆ:**

(೧೭) 'ದಶಭಕ್ತಿ' ಮತ್ತು 'ಸಮಯಸಾರ' . . . ೯೯
ಸೌ ಚಂದ್ರಾವತಿ ಘೂಳಣ್ಣವರ, ಸೇಡಬಾಳ.
(೧೮) ಮಿರ್ಜಿಯವರ ಸಾಹಿತ್ಯ ಸಂಶೋಧನೆ . . ೧೦೨
ಶ್ರೀ ಎಮ್ ಬಿ ಪಾಟೀಲ, ಸೇಡಬಾಳ

**೫. ಪ್ರಬಂಧ ಹಾಗು ವಿಮರ್ಶೆಗಳು:**

(೧೯) 'ಜೈನಧರ್ಮ'ವನ್ನು ಕುರಿತು . . . ೧೦೬
೧. ಶ್ರೀ ಡಿ. ಪುಟ್ಟಸ್ವಾಮಿ, ಬಿ ಎ , ಬಿ.ಎಲ್ , ಸಂ 'ವಿವೇಕಾಭ್ಯುದಯ', ಮಂಗಳೂರು
೨ ಸ್ವಸ್ತಿ ಶ್ರೀ ಅಕಲಂಕಸ್ವಾಮಿಗಳವರು
೩ ಶ್ರೀ. ಜಿ ಬ್ರಹ್ಮಪ್ಪ, ಎಂ ಎ , ಶಿವಮೊಗ್ಗ
(೨೦) 'ಲೇಖನಕಲೆ'ಯೊಂದು ಅಭ್ಯಾಸ ದರ್ಪಣ . . ೧೧೭
ಶ್ರೀ ಎನ್ ಎನ್ ಗದಗಕರ, ಬಿ ಎ , ಧಾರವಾಡ
(೨೧) ಅನುಭವಿಕ ಶಿಕ್ಷಕರ ಶೈಕ್ಷಣಿಕ ಗ್ರಂಥ . . ೧೨೦
ಪ್ರ ಎಸ್ ಡಿ. ಇಂಚಲ, ಬಿ ಎ , ಬಿ ಟಿ , ಹುಬ್ಬಳ್ಳಿ
(೨೨) ಎರಡು ವಿಮರ್ಶಾ ಗ್ರಂಥಗಳು . . . ೧೨೪
ಶ್ರೀ ಡಿ. ಎ ಬೋಗಾರ, ಬಿ ಎ , ಎಲ್‌ಎಲ್ ಬಿ , ಅಥಣಿ
(೨೩) ಅಣ್ಣಾರಾಯರ ಸಾಂಸ್ಕೃತಿಕ ಅಭ್ಯಾಸ . . ೧೨೭
ಶ್ರೀ ಅನಂತರಾವ ಕೆ ಭೋಸಗೆ, ಸೇಡಬಾಳ
(೨೪) ನಡೆದು ಬಂದ ದಾರಿ (ಸಂಪಾದಿತ) . . . ೧೩೧

## ಸುಪ್ರಸಿದ್ಧ ಕನ್ನಡ ಸಾಹಿತ್ಯಿಕ

# ಶ್ರೀ. ಮಿರ್ಜಿ ಅಣ್ಣಾರಾಯ

ಶ್ರೀ. ದಿನಕರ ರಾಮಚಂದ್ರ ಘೋರಪಡೆ, ಬಿ.ಎ., ಬಿ.ಟಿ., ಮಿರಜ.

ಕೆಲವು ದಿವಸಗಳ ಹಿಂದಿನ ಸಂಗತಿ. ನಾನು ರೈಲಿನಿಂದ ಪ್ರವಾಸ ಮಾಡುತ್ತಿದ್ದೆ. ಡಬ್ಬಿಯಲ್ಲಿ ಒಬ್ಬ ದಪ್ಪ, ಹೆಚ್ಚು ಎತ್ತರವೂ ಅಲ್ಲ, ಗಿಡ್ಡೂ ಅಲ್ಲದಂಥ, ತುಸು ಕಪ್ಪು ವರ್ಣದ ವ್ಯಕ್ತಿಯು ಕುಳಿತಿತ್ತು. ಉಡಿಗೆ-ತೊಡಿಗೆ, ಹತ್ತಿರ ಇರುವ ಎರಡು ಕೈಚೀಲಗಳು, ಅವುಗಳಲ್ಲಿಯ ಸಾಮಾನು ಇವುಗಳನ್ನು ನೋಡಿ, ಈ ಗೃಹಸ್ಥ ಯಾರಿರಬೇಕು?-ಎಂದು ನಾನು ಮನದಲ್ಲಿಯೇ ವಿಚಾರಿಸುತ್ತ ಇದ್ದೆ. ಅಷ್ಟರಲ್ಲಿ ಅವರು ನಾವಿರ ಪುಟಗಳ ಒಂದು ದೊಡ್ಡ ಗ್ರಂಥವನ್ನು ಕೈಚೀಲದಿಂದ ತೆಗೆದರು ಅದರಿಂದ ನನ್ನ ಕುತೂಹಲವು ಇನ್ನಿಷ್ಟು ಜಾಗೃತವಾಯಿತು. ಈ ಮನುಷ್ಯನು ಯಾರಾದರೂ ಪ್ರಾಥಮಿಕ ಶಿಕ್ಷಕನಾಗಿರಬೇಕು—ಎಂದು ನಾನು ಅವರ ವಿಷಯಕ್ಕೆ ಕಲ್ಪಿಸಿಕೊಂಡಿದ್ದೆ. ಅದಕ್ಕಾಗಿ ಅವರ ಕಡೆಗೆ ಇಷ್ಟೊಂದು ದೊಡ್ಡ ಪುಸ್ತಕ ಇದ್ದುದನ್ನು ಕಂಡು, ನನಗೆ ಆಶ್ಚರ್ಯವೆನಿಸಿತು. ನನ್ನ ಕಲ್ಪನೆಯನ್ನು ಒರೆಗೆ ಹಚ್ಚುವದಕ್ಕಾಗಿ ನಾನು ಅವರಿಗೆ ಕೇಳಿದೆ:

"ತಾವು ಪ್ರಾಥಮಿಕ ಶಿಕ್ಷಕರಿರುವಿರೇನು?"

"ಹೌದು." ಎಂದು ಅವರು ಉತ್ತರವಿತ್ತರು.

"ಅಂದಮೇಲೆ ಈ ದೊಡ್ಡ ಪುಸ್ತಕ ಯಾವುದು?" ನಾನು ಕೇಳಿದೆ.

"'ಜೈನಧರ್ಮ.' ಧರ್ಮದ ವಿಷಯದಲ್ಲಿ ತುಲನಾತ್ಮಕ ಅಭ್ಯಾಸಮಾಡಿ ಬರೆದ ಗ್ರಂಥವಿದು." ಅವರು ಹೇಳಿದರು.

"ಕನ್ನಡ ಭಾಷೆಯೊಳಗಿನ ಈ ಗ್ರಂಥವನ್ನು ಯಾರು ಬರೆದರು?"

"ನಾನೇ."

ಎಂದು ಪ್ರಾಥಮಿಕ ಶಿಕ್ಷಕರು ಎನ್ನಲು, ನಾನು ಚಕಿತನಾದೆ. ಮತ್ತು ತುಸು ಹೊತ್ತು ಸುಮ್ಮನೆ ಕುಳಿತೆ. ಯಾಕೆಂದರೆ ಒಬ್ಬ ಪ್ರಾಥಮಿಕ ಶಿಕ್ಷಕ ಇಂಥ ದೊಡ್ಡ ಗ್ರಂಥವನ್ನು ಬರೆದಿರಬೇಕು-ಎನ್ನುವ ಮಾತು ನನಗೆ ನಿಜವೆನಿಸದಾಯಿತು. ಆದರೆ ತುಸು ಹೊತ್ತಿನಲ್ಲಿ ಇನ್ನಿಷ್ಟು ಅವರೊಡನೆ ಮಾತನಾಡುವದರಿಂದ ಅವರೇ ಆ ಗ್ರಂಥವನ್ನು ಬರೆದ ಬಗ್ಗೆ ನನಗೆ ನಿಶ್ಚಿತವೆನಿಸಿತು.

ಈ ಪ್ರಾಥಮಿಕ ಶಿಕ್ಷಕ ಯಾರು? ಎಲ್ಲಿಯವರು? ಇಂಥ ದೊಡ್ಡ ಲೇಖಕರಾದುದು ಹೇಗೆ? ಈ ವಿಷಯದಲ್ಲಿ ನನ್ನ ಕುತೂಹಲವು ಇನ್ನಿಷ್ಟು ಕೆರಳಿತು. ಅವರು 'ಜೈನಧರ್ಮ'ವೆಂಬ ಆ ಬೃಹದ್‌ಗ್ರಂಥವನ್ನು ಬರೆದಾಗ ಅವರನ್ನು ಅಭಿನಂದಿಸಿ, ವಿಖ್ಯಾತ ಕನ್ನಡ ಸಾಹಿತ್ಯಿಕ, ತತ್ವಜ್ಞ ಮತ್ತು ಬಿಹಾರದ ಸದ್ಯದ ರಾಜಪಾಲರಾದ ನಾಮದಾರ ರಂಗನಾಥ ದಿವಾಕರರು ಅವರಿಗೆ ಬರೆದ ಪತ್ರವು ನೋಡಲಿಕ್ಕೆ ಸಿಕ್ಕಿತು. ಶ್ರೀ ದಿವಾಕರರು ಈ ಪತ್ರದಲ್ಲಿ ಹೀಗೆ ಹೇಳುವರು:

"ತಮ್ಮ ಮಹಾಗ್ರಂಥ ಕೈಸೇರಿತು. ಬಹಳ ಸ್ತುತ್ಯವಾದ ಪ್ರಯತ್ನವಿದೆ. ಕನ್ನಡದಲ್ಲಿ ತಾವು ಇಷ್ಟು ಶ್ರಮಪಟ್ಟು, ವಿದ್ವತ್‌ಪ್ರಚುರವಾದ ದೊಡ್ಡ ಹೊತ್ತಿಗೆಯನ್ನು ಈ ಮಹತ್ವದ ವಿಷಯದ ಮೇಲೆ ಬರೆದುದು ಬಹಳ ಅಭಿನಂದನೀಯವೆಂಬಲ್ಲಿ ತಿಲಮಾತ್ರವೂ ಸಂಶಯವಿಲ್ಲ. ಎಲ್ಲ ಕನ್ನಡಿಗರು ಇದನ್ನು ಪ್ರೋತ್ಸಾಹಿಸಬೇಕು. ಹಾಗೂ ಈ ಬಗ್ಗೆ ಹೆಮ್ಮೆಪಡಬೇಕು."

ಈ ರೀತಿ ಕನ್ನಡಿಗರ ಹೆಮ್ಮೆಗೆ ಪಾತ್ರರಾದ ಗೃಹಸ್ಥರೆಂದರೆ ಸುಪ್ರಸಿದ್ಧ ಕನ್ನಡ ಸಾಹಿತ್ಯಿಕ, ಟೀಕಾಕಾರ, ಲಘು ಕಥಾಲೇಖಕ ಮತ್ತು ಕಾದಂಬರಿಕಾರ ಶ್ರೀ ಮಿರ್ಜಿ ಅಣ್ಣಾರಾಯರು. ತಮ್ಮ ಪರಿಚಯವನ್ನು ಮಾಡಿಕೊಡುತ್ತ ಅಣ್ಣಾರಾಯರೆಂದರು: "ನನ್ನ ಮನೆತನವು ಮೊದಲು ಮಿರಜಿಯದು. ಮಿರಜಿಯಲ್ಲಿ ನನ್ನದೊಂದು ಚಿಕ್ಕ ಮನೆಯಿದೆ. ನೂರು ವರ್ಷಗಳ ಮೊದಲು ನನ್ನ ಅಜ್ಜ ಅಣ್ಣಪ್ಪ ಮಿರಜಿ ಇವರು ಮಿರಜಿಯಿಂದ ಹತ್ತು ಹನ್ನೆರಡು ಮೈಲಿನ ಮೇಲಿರುವ ಸೇಡಬಾಳದಲ್ಲಿ ನಿಲ್ಲಲಿಕ್ಕೆ ಹೋದರು. ಅಲ್ಲಿಯೇ ನಾನು ಹುಟ್ಟಿ ಬೆಳೆದೆ. ನನ್ನ ತಂದೆತಾಯಂದಿರು ಅಕ್ಷರಗಳನ್ನು ಕಲಿತವರಲ್ಲ. ಆದರೆ ತುಂಬ ಸುಸಂಸ್ಕೃತರು."

ಮನೆಯ ಆರ್ಥಿಕ ಪರಿಸ್ಥಿತಿಯು ಪ್ರತಿಕೂಲವಿದ್ದರೂ ಸಹ ಸರ್ವ ಕಷ್ಟಗಳಿಗೆ ಮುಖಕೊಟ್ಟು, ಮಿರ್ಜಿ ಅಣ್ಣಾರಾಯರು ಎರಡನೆಯ ವರ್ಷದ ಟ್ರೇಂಡ ಶಿಕ್ಷಕರಾದರು. ಪ್ರಾಥಮಿಕ ಶಾಲೆಯಲ್ಲಿ ಅವರು ಕಲಿಯುತ್ತಿದ್ದಾಗಿನಿಂದಲೂ ಕವಿತೆ, ಕಥೆ ಮೊದಲಾದುವುಗಳನ್ನು ಬರೆಯುತ್ತಿದ್ದರು. ಟ್ರೇನಿಂಗ ಕಾಲೇಜಕ್ಕೆ ಹೋಗುವ ಮೊದಲು ಅವರು ಕೆಲವು ಕಾದಂಬರಿಗಳನ್ನು ಪ್ರಸಿದ್ಧಿಸಿದರು. ಅಲ್ಲದೆ 'ಜಯಂತಿ', 'ಜಯಕರ್ನಾಟಕ', 'ಜೀವನ' ಇವೇ ಮೊದಲಾದ ಮಾಸಪತ್ರಿಕೆಗಳಲ್ಲಿ ವಿವಿಧ ವಿಷಯಗಳ ಮೇಲೆ ಲೇಖನ ಬರೆ

ಯುತ್ತಿದ್ದರು. ತಮ್ಮ ವಯಸ್ಸಿನ ಮೂವತ್ತನಾಲ್ಕು ವರ್ಷಗಳಲ್ಲಿ—ಇಷ್ಟು ಸ್ವಲ್ಪ ಅವಧಿಯಲ್ಲಿಯೇ—'ನಿಸರ್ಗ', 'ರಾಷ್ಟ್ರಪುರುಷ', 'ಅಶೋಕ ಚಕ್ರ', 'ಪ್ರತಿ ಸರಕಾರ', 'ರಾಮಣ್ಣ ಮಾಸ್ತರು', 'ಜೈನಧರ್ಮ', 'ದತ್ತವಾಣಿ', 'ಲೇಖನ ಕಲೆ' ಇವೇ ಮೊದಲಾದ ಹದಿನೈದಕ್ಕೂ ಮೇಲ್ಪಟ್ಟು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಅದರಿಂದ ಅವರು ನವಜಾಗ್ರತ ಕರ್ನಾಟಕದ ಅತ್ಯಂತ ಅಭಿಮಾನಾಸ್ಪದ ಮತ್ತು ಪ್ರಿಯ ಲೇಖಕರಾಗಿದ್ದಾರೆ.

'ನಿಸರ್ಗ' ಎಂಬ ಇವರ ಕಾದಂಬರಿಗೆ ಐದುನೂರು ರೂಪಾಯಿಗಳ ಬಹುಮಾನ ಬಂದಿತು. ಕ್ರಿ. ಶ. ೧೯೪೬ನೆಯ ವರ್ಷದ ಕನ್ನಡ ಸಾಹಿತ್ಯದಲ್ಲಿ ಅದು ಸರ್ವೋತ್ಕೃಷ್ಟ ಕಾದಂಬರಿ ಎನಿಸಿದೆ. ಮೈಸೂರು ಸರಕಾರದ ದೇವರಾಜ ನಿಧಿಯ ಪ್ರಥಮ ವರ್ಗದ ಪಾರಿತೋಷಕ ಇದಕ್ಕೆ ಲಭಿಸಿದೆ. ಧಾರವಾಡದ ವಿದ್ಯಾವರ್ಧಕ ಸಂಘವು ಬಹುಮಾನ ಕೊಟ್ಟು, ಇವರನ್ನು ವಿಶೇಷವಾಗಿ ಸತ್ಕರಿಸಿತು. ಕನ್ನಡ ಸಾಹಿತ್ಯ ಪರಿಷತ್ತೂ ಕೂಡ ಇವರ ಕೃತಿಗಳಿಗೆ ಬಹುಮಾನಧನವನ್ನು ಸಲ್ಲಿಸಿ ಗೌರವಿಸಿದೆ. ಇವರ 'ನಿಸರ್ಗ' ಕಾದಂಬರಿಯು ಕೆಲವು ವರ್ಷ ಮುಂಬೈ ವಿಶ್ವವಿದ್ಯಾನಿಲಯದ ಬಿ. ಎ. ವರ್ಗಕ್ಕೆ ಪಠ್ಯಪುಸ್ತಕ ವಾಗಿಯೂ ಇತ್ತು.

ಮಹಾರಾಷ್ಟ್ರದ ಗಣ್ಯಲೇಖಕರಾದ ಪ್ರೊಫೆಸರ ನಾ. ಸಿ. ಫಡಕೆಯವರ "ಪ್ರತಿಭಾ ಸಾಧನ"ದ ಮಾದರಿಯಲ್ಲಿ ಇವರ "ಲೇಖನ ಕಲೆ"ಯು ಕನ್ನಡದಲ್ಲಿ ಮಾರ್ಗದರ್ಶಕ ಗ್ರಂಥವಾಗಿದೆ.

ಈ ರೀತಿಯ ವಿವಿಧ ಮತ್ತು ಮೌಲಿಕ ಗ್ರಂಥಗಳನ್ನು ರಚಿಸುವದಕ್ಕಾಗಿ ಶ್ರೀ ಅಣ್ಣಾರಾಯರು ಕನ್ನಡ, ಹಿಂದಿ, ಮರಾಠಿ, ಸಂಸ್ಕೃತ ಮತ್ತು ಪ್ರಾಕೃತ ಗ್ರಂಥಗಳ ವ್ಯಾಸಂಗವನ್ನು ಸತತ ಮಾಡುತ್ತಾರೆ. ಅವರ ಮನೆಯಲ್ಲಿ ಗ್ರಂಥ ಸಂಗ್ರಹವು ವಿವಿಧ ಹಾಗೂ ವಿಪುಲವಾಗಿದೆ. ಮಿರ್ಜಿಯವರು ಆಗಾಗ ಹೇಳುತ್ತಾರೆ:. "ನಾನು ಒಳ್ಳೆಯ ಲೇಖಕನಾದೇನು ಎಂಬ ಅಪೇಕ್ಷೆಯಿಂದ ವಿಖ್ಯಾತ ಕನ್ನಡ ಸಾಹಿತ್ಯಿಕ ಪ್ರಿನ್ಸಿಪಾಲ್ ವಿ. ಕೆ. ಗೋಕಾಕ, ಮತ್ತು ಪ್ರೊ. ರಂಗನಾಥ ಮುಗಳಿ ಇವರು ನನಗೆ ಮಾಡಿದ ಮಾರ್ಗದರ್ಶನವನ್ನು ನಾನೆಂದೂ ಮರೆಯಲಾರೆ. ಧ್ಯೇಯ ದೃಷ್ಟಿ ಹಾಗೂ ಲೇಖನಕಲೆಯ ತಂತ್ರ ಗಳನ್ನು ಅವರು ನನಗೆ ನೀಡಿದರು." ಅದರಿಂದ ಇವರಿಗೆ ಸಾಹಿತ್ಯ, ಗ್ರಂಥಾ ಲಯಗಳೆಂದರೆ ಅಮೌಲ್ಯ ನಿಧಿಗಳಂತಾಗಿವೆ. ಅವೇ ಅವರ ಸಂಪತ್ತು, ಸೌಖ್ಯ.

ಶ್ರೀಯುತ ಅಣ್ಣಾರಾಯ ಮಿರ್ಜಿಯವರು ದಕ್ಷಿಣ ಹಿಂದುಸ್ಥಾನದ ಪ್ರವಾಸವನ್ನೆಲ್ಲ ಮಾಡಿದ್ದಾರೆ. ಉತ್ತರವಲ್ಲಿ ಕವಿವರ್ಯ ಟಾಗೋರರ 'ಶಾಂತಿನಿಕೇತನ', ಪಂಡಿತ ಮದನಮೋಹನ ಮಾಲವೀಯವರ ಬನಾರಸ ಹಿಂದೂ ವಿದ್ಯಾಪೀಠಗಳನ್ನು ನೋಡಿದ್ದಾರೆ. ಅಲ್ಲದೆ ಕಲಕತ್ತಾ, ಆರಾ, ಆಗ್ರಾ, ಅಲಹಾಬಾದ, ದಿಲ್ಲಿ, ಅಬೂಗಿರಿ, ಗಿರನಾರ ಮೊದಲಾದ ಕಡೆಗೆ ಹೋಗಿ ಬಂದವರಿದ್ದಾರೆ. ತಮ್ಮ ಉತ್ತರ ಭಾರತದ ಪ್ರವಾಸದ ಅನುಭವ ಗಳನ್ನು ವಿವರಿಸುವ 'ನಾನು ಕಂಡ ನಾಡು' ಎಂಬ ಗ್ರಂಥ ಒಂದನ್ನೂ ರಚಿಸಿದ್ದಾರೆ.

ಶ್ರೀ ಮಿರ್ಜಿಯವರು ವೃತ್ತಿಯಿಂದ ರಾಷ್ಟ್ರೀಯ ಹಾಗೂ ಜಾತ್ಯಾತೀತ ರಿದ್ದಾರೆ. ಭಾರತದ ಸ್ವಾತಂತ್ರ್ಯದ ಚಳುವಳಿಯಲ್ಲಿ ಇವರು ಅಪ್ರತ್ಯಕ್ಷ ರೀತಿಯಿಂದ ಬಹಳಷ್ಟು ಭಾಗ ತಕ್ಕೊಂಡಿದ್ದಾರೆ. ಕರ್ನಾಟಕದ ನೇತೃಗಳಾದ ಶ್ರೀ ರಂಗರಾವ ದಿವಾಕರರ ಆದೇಶದಂತೆ ಶ್ರೀ ಮಿರಜಿಯವರು ಮೂಳವಾಡ ಎಂಬ ಹಳ್ಳಿಯಲ್ಲಿ ಕ್ರಿ. ಶ. ೧೯೪೨ರ ಚಳುವಳಿಯ 'ಬುಲೆಟಿನ್' ಮುದ್ರಿಸಿ ಕೊಳ್ಳುವ ಕೆಲಸ ಮಾಡುತ್ತಿದ್ದರು.

ಇದೀಗ ಪ್ರಕಟವಾದ ಇವರ 'ಜೈನಧರ್ಮ' ಎಂಬ ಗ್ರಂಥಕ್ಕೆ ಕರ್ನಾಟಕ ವಿದ್ಯಾಪೀಠದವರು ೨೫೦ ರೂಪಾಯಿಗಳ ಪಾರಿತೋಷಕ ಕೊಟ್ಟಿದ್ದಾರೆ. ಅದರಂತೆ ಮೈಸೂರು ಸರಕಾರದವರೂ ಇದಕ್ಕೆ ಮೂರುನೂರು ರೂಪಾಯಿ ಗಳಷ್ಟು ಬಹುಮಾನಧನವನ್ನಿತ್ತು ಮನ್ನಿಸಿದ್ದಾರೆ. ಈ ಗ್ರಂಥದಲ್ಲಿ ಇವರು ವೈದಿಕ, ವೀರಶೈವ, ಇಸ್ಲಾಂ, ಕ್ರಿಸ್ತ ಮೊದಲಾದ ಧರ್ಮಗಳನ್ನು ತುಲನಾತ್ಮಕ ದೃಷ್ಟಿಯಿಂದ, ಆಧುನಿಕ ಕಾಲಕ್ಕೆ ಯೋಗ್ಯವೆನಿಸುವಂತೆ ಸಂಶೋಧನಾತ್ಮಕ ವಿವೇಚನೆ ಮಾಡಿದ್ದಾರೆ. ಈ ಗ್ರಂಥದ ಬಗ್ಗೆ ಅಂತರ್‌ರಾಷ್ಟ್ರೀಯ ವಿದ್ವಾಂಸ ರಾದ ಡಾ. ಎ. ಎನ್. ಉಪಾಧ್ಯೆಯವರು ಹೀಗೆ ಬರೆಯುವರು: "ಈ ಮಾದರಿಯ ಕೆಲವು ಗ್ರಂಥಗಳು ಜರ್ಮನ, ಫ್ರೆಂಚ, ಇಂಗ್ಲಿಷ ಮತ್ತು ಹಿಂದಿ ಭಾಷೆಗಳಲ್ಲಿ ಗ್ಲಾಸನಾಫ್, ಗಿರನೌ, ಜೈನಿ ಮತ್ತು ಕೈಲಾಸಚಂದ್ರ ಶಾಸ್ತ್ರಿಗಳು ಬರೆದದ್ದು ಅವೆ. ಈ ದೃಷ್ಟಿಯಿಂದ ವಿಚಾರಮಾಡಲಾಗಿ ಶ್ರೀ ಮಿರ್ಜಿಯವರ "ಜೈನ ಧರ್ಮ" ಎಂಬ ಈ ಗ್ರಂಥವು ಕನ್ನಡ ಭಾಷೆಯಲ್ಲಿ ಮೊದಲನೆಯದಾಗಿದೆ. ಅಲ್ಲದೆ ವಿಶಿಷ್ಟ ಹೆಮ್ಮೆಯ ಸ್ಥಾನವನ್ನು ದೊರಕಿಸುವದೆಂದು ಹೇಳಲು ನನಗೆ ಸಂಕೋಚವಿಲ್ಲ. ಈ ಗ್ರಂಥದ ವಿಷಯವ್ಯಾಪ್ತಿಯನ್ನು ನೋಡಿದರೆ,

ಶ್ರೀಯುತ ಅಣ್ಣಾರಾಯ ಮಿರ್ಜಿಯವರ ವಿವಿಧ ವಾಚನ, ದೀರ್ಘ ಪ್ರಯತ್ನ ಮತ್ತು ವ್ಯಾಪಕದೃಷ್ಟಿ ಇವುಗಳನ್ನು ಯಾರೂ ಮೆಚ್ಚಬಹುದು. ಗ್ರಂಥದಲ್ಲಿ ಎಲ್ಲೆಡೆಗೂ ಪರಿಪಕ್ವವಾದ ತುಲನಾತ್ಮಕ ದೃಷ್ಟಿ, ವ್ಯಾಪಕ ವಿಚಾರ ಮತ್ತು ಸಮನ್ವಯ ಬುದ್ಧಿ ಇವೇ ಕಣ್ಣಿಗೆ ಬೀಳುತ್ತವೆ. ಈ ಗ್ರಂಥ ಪ್ರಕಾಶನದಿಂದ ಜೈನಧರ್ಮದ ವಿಷಯಕ್ಕೆ ಒಂದು ಶ್ರೇಷ್ಠ ಗ್ರಂಥವು ಅಭ್ಯಾಸಿಗಳಿಗೆ ಲಭಿಸಿ ದಂತಾಗಿದೆ. ಈ ಗ್ರಂಥದ ಸಹಾಯದಿಂದ ಕನ್ನಡ ಪಂಡಿತರು ಪ್ರಾಚೀನ ಜೈನಾಚಾರ್ಯರ ಕನ್ನಡ ಕಾವ್ಯಗಳಲ್ಲಿ ಬರುವ ಹಲವು ಸಂದರ್ಭಗಳನ್ನು ಸಹಜವಾಗಿಯೂ ಸುಲಭವಾಗಿಯೂ ತಿಳಿದುಕೊಳ್ಳಬಹುದು." ಇದೊಂದು ಕನ್ನಡ ವಾಙ್ಮಯದಲ್ಲಿ ಪ್ರಾಮಾಣಿಕ ಗ್ರಂಥವೆಂದು ಪ್ರಸಿದ್ಧಿಯನ್ನು ಪಡೆದಿದೆ.

ದಕ್ಷಿಣಕನ್ನಡ ಜಿಲ್ಲೆಯ ಧರ್ಮಸ್ಥಳದಲ್ಲಿ ಸ್ವಲ್ಪ ದಿನಗಳ ಹಿಂದೆ ಈ ವರ್ಷದ ಸರ್ವಧರ್ಮ ಪರಿಷತ್ತು ನೇರಿತ್ತು. ಈ ಸಭೆಗೆ ಶ್ರೀ ಅಣ್ಣಾರಾಯ ರನ್ನು ಕರೆಸಿದ್ದರು. ಅಲ್ಲಿ ಜೈನಧರ್ಮದ ವಿಷಯದಲ್ಲಿ ಇವರ ಪ್ರವಚನ ವಾಯಿತು. ಸರ್ವಧರ್ಮ ಸಮನ್ವಯವನ್ನು ಬೋಧಿಸುವ "ಜೈನಧರ್ಮ" ಎಂಬ ಗ್ರಂಥವನ್ನು ಇವರು ಬರೆದ ಬಗ್ಗೆ ಆ ಪರಿಷತ್ತಿನಲ್ಲಿ ಒಂದು ವಜ್ರದ ಉಂಗುರ ಹಾಗೂ ಐದುನೂರು ರೂಪಾಯಿಗಳನ್ನು ಬಹುಮಾನ ಕೊಟ್ಟು, ಶ್ರೀ ಅಣ್ಣಾರಾಯರನ್ನು ಸತ್ಕರಿಸಲಾಯಿತು.

ಜೈನಧರ್ಮದ ಬಗ್ಗೆ ಮಾತನಾಡುತ್ತ ಅವರು ಅಂದರು: "ಇಂದಿನ ಜಗತ್ತಿನೊಳಗಿನ ಅಶಾಂತಿಯು ಪ್ರತಿನಿತ್ಯ ಬೆಳೆಯುತ್ತಿರುವ ಮಾನವನ ಅವಶ್ಯ ಕತೆ ಹಾಗೂ ಭಿನ್ನ ಭಿನ್ನ ವಿಚಾರಸರಣಿ ಇವುಗಳಿಂದ ಉಂಟಾಗಿದೆ. ಅದಕ್ಕಾಗಿ ಪ್ರತಿಯೊಬ್ಬ ವ್ಯಕ್ತಿಯು ತನ್ನ ಅವಶ್ಯಕತೆಗಿಂತ ಹೆಚ್ಚಿನ ವಸ್ತುಗಳ ಸಂಗ್ರಹ ಮಾಡಬಾರದು. ಇದಕ್ಕೆ ಜೈನ ಪರಿಭಾಷೆಯಲ್ಲಿ 'ಪರಿಗ್ರಹ ಪರಿಮಾಣ' ಎನ್ನುವರು. ಇದರರ್ಥ: ತನ್ನ ಅವಶ್ಯಕತೆಗಳನ್ನು ಶಕ್ಯವಿದ್ದಷ್ಟು ಕಡಿಮೆ ಮಾಡಬೇಕು.

"ಎಷ್ಟೋ ಭಿನ್ನ ಭಿನ್ನ ವಿಚಾರಸರಣಿಗಳಿದ್ದರೂ ಸಹ ಪ್ರತಿಯೊಂದು ವಿಚಾರದಲ್ಲಿಯೂ ಸ್ವಲ್ಪ ಭಾಗವಾದರೂ ಸತ್ಯಾಂಶವಿರುವದು. ಆ ಸತ್ಯಾಂಶ ವನ್ನು ಪ್ರತಿಯೊಬ್ಬರು ಗಮನದಲ್ಲಿಟ್ಟುಕೊಂಡು, ಜಗತ್ತಿನೊಳಗಿನ ನಿಜವಾದ ಸತ್ಯವನ್ನು ತಿಳಿಯಲಿಕ್ಕೆ ಯತ್ನಿಸಬೇಕು. ಈ ದೃಷ್ಟಿಕೋಣಕ್ಕೆ ಸ್ಯಾದ್ವಾದ ದೃಷ್ಟಿ ಅಥವಾ ಅನೇಕಾಂತವಾದ ಎನ್ನುವರು. ಇಂದಿನ ಜಗತ್ತಿಗೆ ಜೈನ

ಧರ್ಮದ ಈ ಸಮನ್ವಯ ದೃಷ್ಟಿಕೋಣ ಹಾಗೂ ಸಚ್ಚಾರಿತ್ರಗಳ ಅವಶ್ಯಕತೆಯು ಬಹಳವಾಗಿದೆ."

"ಭಸ್ಮಾಸುರ"—ಎಂಬ ಕಾದಂಬರಿಯಲ್ಲಿ ಮಿರ್ಜಿಯವರು ೧೯೪೨ರ ಚಳುವಳಿಯ ತರುವಾಯ ಪುಂಡರ ತಂಡವು ಹೇಗೆ ಬೆಳೆಯಿತು; ಮತ್ತು ಮಹಾತ್ಮರ ವಧೆಯ ನಂತರ-೧೯೪೮ರಲ್ಲಿ-ಮನೆಗಳನ್ನು ಸುಡುವ ಉದ್ಯೋಗ ಹೇಗೆ ಆಯಿತು?—ಈ ಸಮಾಜ ಪರಿವರ್ತನೆಯ ವಿಷಯ ವಿವೇಚನೆಯನ್ನು ಶ್ರೀ ಅಣ್ಣಾರಾಯರು ಅತ್ಯಂತ ಸ್ಪಷ್ಟ ಶಬ್ದಗಳಲ್ಲಿ ಮಾಡಿದ್ದಾರೆ. ಬ್ರಾಹ್ಮಣರ ಮನೆಗಳನ್ನು ಸುಡುವಿಕೆ (ಜಾಳಪೋಳ) ಮತ್ತು ಜಾತೀಯತೆಗಳ ಬಗ್ಗೆ ಅಣ್ಣಾರಾಯರು ಹೀಗೆನ್ನುವರು:

"ಗಾಂಧೀಜಿಯವರ ಕೊಲೆಯ ತರುವಾಯ ಕೆಲವು ಗುಂಡರಿಗೆ ಸಂಧಿಯು ಸಿಕ್ಕಿತು. ಆ ಪ್ರಸಂಗದ ಉಪಯೋಗವನ್ನು ಅವರು ಸ್ವಾರ್ಥಕ್ಕಾಗಿ ಮಾಡಿಕೊಂಡರು. ಸುಡುವುದಕ್ಕೆ ಹಾಗೂ ಸುಲಿಗೆಗಳಿಗೆ ಬಹುಜನರ ಬೆಂಬಲ ಸಿಗಬೇಕೆಂದು ಅವರು ಬ್ರಾಹ್ಮಣ ದ್ವೇಷವನ್ನು ಹೊತ್ತಿಸಿದರು. ಮತ್ತು ಅದನ್ನು ಉಪಯೋಗಿಸಿಕೊಂಡರು.

"ಹಳ್ಳಿಗಳಲ್ಲಿ ಅಶಿಕ್ಷಿತರಲ್ಲಿ ಜಾತೀಯತೆಯು ಇಲ್ಲ. ನಗರದಲ್ಲಿ ಸುಶಿಕ್ಷಿತರಲ್ಲಿ ಮಾತ್ರ ಅದು ಬೆಳೆಯುತ್ತಿದೆ; ಅದೂ ಆರ್ಥಿಕ ತಳಹದಿಯ ಮೇಲೆ. ಈಗೀಗ ಸುಶಿಕ್ಷಿತರಲ್ಲಿ ಅತ್ಯಂತ ಸ್ವಾರ್ಥವೃತ್ತಿಯು ಸೇರಿಕೊಂಡಿದೆ. ಎಲ್ಲ ಧರ್ಮಗಳಲ್ಲಿಯ ಸುಶಿಕ್ಷಿತರೂ ತಮ್ಮ ತಮ್ಮ ವೈಯಕ್ತಿಕ ಸ್ವಾರ್ಥಸಾಧನೆಗಾಗಿ, ಜಾತೀಯತೆಯನ್ನು ತಮ್ಮ ಸಮಾಜದಲ್ಲಿ ಹಬ್ಬಿಸಿ, ಆ ಭಾವನೆಯನ್ನು ತಮ್ಮ ಲಾಭಕ್ಕೆ ಉಪಯೋಗಿಸಿಕೊಳ್ಳುತ್ತಾರೆ."

ಈ ಪ್ರಕಾರ ಉಚ್ಚ ವಿಚಾರ ಇಟ್ಟುಕೊಂಡು, ವಿವಿಧ ಕ್ಷೇತ್ರಗಳಲ್ಲಿ ಲೇಖನಕಾರ್ಯ ಮಾಡುತ್ತಿರುವ ಶ್ರೀ ಮಿರ್ಜಿ ಅಣ್ಣಾರಾಯರು ಹೊಟ್ಟೆಯ ಸಲುವಾಗಿ ಉಗಾರದಲ್ಲಿ ಶಿಕ್ಷಕನ ಕಾರ್ಯವನ್ನು ಕೈಕೊಂಡಿದ್ದಾರೆ. ಇಷ್ಟು ವಿವಿಧ ರೀತಿಯಲ್ಲಿ ಲೇಖನ ಶಕ್ತಿಯುಳ್ಳ ವ್ಯಕ್ತಿಯ ಬುದ್ಧಿ ಮತ್ತು ಶಕ್ತಿ ಅಲ್ಲದೆ ವೇಳೆಗಳನ್ನು ಹೆಚ್ಚು ಚೆನ್ನಾಗಿ ಉಪಯೋಗವಾಗುವಂತೆ ಯೋಜನೆಯಾಗವಾಗಬೇಕೆಂಬ ಇಚ್ಛೆಯಿಂದ ನಾನು ಅವರಿಗೆ ಅಂದೆ:

"ನೀವು ಶಿಕ್ಷಕವೃತ್ತಿಯನ್ನು ಏಕೆ ಸ್ವೀಕರಿಸಿದ್ದೀರಿ? ನಿಮ್ಮ ಎಲ್ಲ ವೇಳೆಯನ್ನು ಲೇಖನ ವ್ಯವಸಾಯದಲ್ಲಿಯೇ ಏಕೆ ಕಳೆಯುವುದಿಲ್ಲ?"

ಬೇಡವಾದ ಪ್ರಶ್ನೆಯನ್ನು ನಾನು ಅವರಿಗೆ ಕೇಳಿದಂತೆ ಆಯಿತು; ಇದು ಅವರ ಮುಖಚರ್ಯೆಯಿಂದ ತಿಳಿಯಿತು. 'ನೀವು ಕೇಳುತ್ತೀರೆಂದು ಹೇಳುತ್ತೇನೆ.'—ಎಂದು ಪ್ರಸ್ತಾವಿಸಿ ಮುಂದೆ ಹೇಳತೊಡಗಿದರು:

"ನನಗೆ ಏಳು ಜನರನ್ನು ಸಂರಕ್ಷಿಸಬೇಕಾಗಿದೆ. ನನ್ನ ಹಿರಿಯರು ಸ್ವಂತ ಕಷ್ಟದಿಂದ ಸಂಪಾದಿಸಿದ ಭೂಮಿಯಿಂದ ನಮ್ಮ ಸಂಸಾರ ಸಾಗದು. ಅದರಿಂದ ಶಿಕ್ಷಕನಾಗಿದ್ದೇನೆ. ಈ ಶಿಕ್ಷಕವೃತ್ತಿಯಲ್ಲಿ ಸಂಬಳ ಹೆಚ್ಚಾಗ ಬೇಕೆಂದು ಶಾಲಾಂತ (ಮಾಟ್ರಿಕ್) ಪರೀಕ್ಷೆಗೆ ಕುಳಿತಿರುವೆ."

"ಕಳೆದ ಹತ್ತು ವರುಷಗಳಲ್ಲಿ ನಾನು ಬರೆದ ಗ್ರಂಥಗಳ ಮಾರಾಟದಿಂದ ಒಂದು ಲಕ್ಷರೂಪಾಯಿಗಳಾದರೂ ಬಂದಿರಬೇಕು. ಅದರಲ್ಲಿ ಹತ್ತೆಂಟು ಸಾವಿರ ರೂಪಾಯಿಗಳು ಮಾತ್ರ ನನ್ನ ಕೈಸೇರಿರಬೇಕು. ಆದರೆ ನಾನವನ್ನು ಕುಟುಂಬದ ವೆಚ್ಚಕ್ಕಾಗಿ ಉಪಯೋಗಿಸಬಾರದೆಂದು ನಿಶ್ಚಯಿಸಿರುವೆ. ಸೇಡ ಬಾಳದಂಥ ಹಳ್ಳಿಯಲ್ಲಿ 'ಶಾಂತಿಸೇವಾಸದನ' ಎಂಬ ಗ್ರಂಥ ಪ್ರಕಾಶನ ಸಂಸ್ಥೆ ಯೊಂದನ್ನು ಆರಂಭಿಸಿರುವೆ. ಈ ಸಂಸ್ಥೆಯು ಹಳ್ಳಿಗಾಡ ಪ್ರದೇಶದಲ್ಲಿ ಶಿಕ್ಷಣ, ಸಾಹಿತ್ಯ ಮತ್ತು ಸಂಸ್ಕೃತಿಗಳ ಪ್ರಸಾರಕಾರ್ಯವನ್ನು ಮಾಡುವದು ಅದಕ್ಕೆ ಈ ಹಣವನ್ನು ಉಪಯೋಗಿಸುವೆ. ಈ ಸಂಸ್ಥೆಯ ಸಲಹೆಗಾರ ಮಂಡಲದಲ್ಲಿ ಪ್ರಾ. ರಂ. ಶ್ರೀ ಮುಗಳಿ, ಪ್ರೊ. ಮಾಳವಾಡ, ಕವಿಭೂಷಣ ಕೃಷ್ಣಶರ್ಮ, ಶ್ರೀ ಟಿ. ಕೆ. ತುಕೋಳ, ಶ್ರೀ ಕೆ. ಎಫ್. ಪಾಟೀಲರಂಥವರು ನಮಗೆ ದೊರೆ ತಿದ್ದಾರೆ. ಇಲ್ಲಿಯ ವರೆಗೆ ಈ ಸಂಸ್ಥೆಯಿಂದ ಹದಿನೈದು ಗ್ರಂಥಗಳು ಪ್ರಕಟ ವಾಗಿವೆ."

ತಾವು ಶಿಕ್ಷಕವೃತ್ತಿಯನ್ನು ಏಕೆ ಬಿಡುವದಿಲ್ಲ?—ಈ ಪ್ರಶ್ನೆಯ ಉತ್ತರ ವನ್ನು ಹೆಚ್ಚಿಗೆ ಸ್ಪಷ್ಟಪಡಿಸುತ್ತ ಅಣ್ಣಾರಾಯರು ಮಂಡಿಸಿದ ವಿಚಾರಗಳು ಬಹಳ ವಿಚಾರಣೀಯವಾಗಿವೆ. ಅವರು ಹೇಳಿದರು:

"ಹೊಟ್ಟೆ ಮತ್ತು ಲೇಖನ ವ್ಯವಸಾಯಗಳಿಗೆ ಗಂಟುಹಾಕಿದರೆ ದುಡ್ಡಿ ಗಾಗಿ ನಿತ್ಯ ಇಂತಿಷ್ಟು ಪುಟ ಲೇಖನ ಬರೆಯಬೇಕೆಂದಾಗುವದು. ಮತ್ತು ಸಂಸಾರದ ಅಗತ್ಯಕ್ಕಾಗಿ ಅವುಗಳನ್ನು ಕೂಡಲೆ ಪ್ರಕಟಿಸಲೂ ಬೇಕಾಗುವದು. ಅದರಿಂದ ಲೇಖನದ ಮೌಲಿಕತೆಯು ಕಡಿಮೆಯಾಗುತ್ತದೆ; ಅದರಲ್ಲಿ ಔದ್ಯೋಗಿಕತೆಯು ಸಮಾವೇಶವಾಗುತ್ತದೆ. ಮೌಲಿಕತೆ ಮತ್ತು ವೈಶಿಷ್ಟ್ಯ ಗಳು ನಷ್ಟವಾಗುತ್ತವೆ. ಪಾತ್ರಗಳ ಹೆಸರನ್ನು ಬೇರೆಯಾಗಿಡುವದು, ಸಂವಿ

ಧಾನವನ್ನು ಸ್ವಲ್ಪ ವ್ಯತ್ಯಾಸಗೊಳಿಸುವುದು, ಕಾದಂಬರಿಯ ಹೆಸರನ್ನು ಬೇರೆಯೊಂದನ್ನು ಇಟ್ಟು, ಹೊಸ ಹೆಸರಿನಲ್ಲಿ ಹಳೆಯ ಕಾದಂಬರಿಯನ್ನು ಜನತೆಗೆ ಕೊಡಬೇಕಾಗುವುದು. ಹೀಗೆ ಇಂದು ವ್ಯವಸಾಯ ದೃಷ್ಟಿಯಿಂದ ಸಾಹಿತ್ಯದ ಬೆಳವಣಿಗೆ ಆಗುತ್ತಿದೆ, ಹೀಗೆಂದು ನನಗೆ ತೋರುತ್ತಿದೆ. ನನ್ನ ಮತದಿಂದ ಲೇಖನದ ಪುಟಗಳು ಹೆಚ್ಚಾಗುವದಕ್ಕಿಂತ, ಹೊಸ ವಿಚಾರಗಳನ್ನು ಹೇಳುವ ಪ್ರಸಂಗ ಬಂದಾಗ-ಅಂತಃಪ್ರೇರಣೆಯಾದಾಗಲೇ-ಬರೆಯಬೇಕು. ಲೇಖನ ಕಡಿಮೆಯಾದರೂ ಅಡ್ಡಿಯಿಲ್ಲ."

ಶ್ರೀ ಅಣ್ಣಾರಾಯರ ಈ ವಿಚಾರ ಮತ್ತು ಅವರ ಕಾರ್ಯ ನೋಡಿ, ಅವರ ವಿಷಯಕ್ಕಿರುವ ನನ್ನ ಆದರವು ನೂರರಷ್ಟು ಬೆಳೆಯಿತು.

ಇಂಥ ಹಿರಿಯ ಲೇಖಕರಿಗೆ ತಿಂಗಳಿಗೆ ಹತ್ತು ರೂಪಾಯಿ ಸಂಬಳ ಹೆಚ್ಚಾಗಲೆಂದು ಪರೀಕ್ಷೆಗೆ ಕೂಡುವ ಪ್ರಸಂಗ ಬರಬೇಕು! ಇದರ ಬಗ್ಗೆ ಸಂತಾಪ ಉತ್ಪನ್ನವಾಯಿತು! ಶಾಸನ ಸಂಸ್ಥೆ ಹಾಗೂ ಸಮಾಜಗಳು ಇಂಥ ವ್ಯಕ್ತಿಗಳ ಬಗ್ಗೆ ವಿಚಾರ ಮಾಡಬಾರದೆ?-ಎಂದು ಮನದಲ್ಲಿ ವಿಚಾರಿಸುತ್ತಲೇ ನಾನು ಅಣ್ಣಾರಾಯರನ್ನು ಬೀಳ್ಕೊಂಡೆ. ಶ್ರೀ ಮಿರಜಿಯವರಂಥ ದೊಡ್ಡ ಜನರ ಉಪಯೋಗವು ಇಂದು ದೇಶಕ್ಕೆ ಆಗದಂತಾಗಿದೆ. ಸ್ವತಂತ್ರ ಭಾರತ ದಲ್ಲಿಯ ಇಂಥ ಕಾರ್ಯಕುಶಲ ನಾಗರಿಕರ ಬುದ್ಧಿಯನ್ನು ವ್ಯರ್ಥ ಕಳೆಯು ವುದೇ?—ಎಂಬುದೇ ಇಂದಿನ ಪ್ರಶ್ನೆಯಾಗಿದೆ.

# ಪ್ರಥಿತಯಶ ಕಾದಂಬರಿಕಾರ

# ಶ್ರೀ. ಅಣ್ಣಾರಾಯ ಮಿರ್ಜಿ

ಡಾ. ವಿಲಾಸ ಆದಿನಾಥ ಸಂಗವೆ, ಎಮ್.ಎ., ಪಿಎಚ್.ಡಿ., ಕೊಲ್ಹಾಪುರ.

'ಎಲ್ಲಿ ಬೆಳೆಯುವದೋ ಅಲ್ಲಿ ಮಾರಾಟವಾಗುವದಿಲ್ಲ.' ಈ ನಾಣ್ನುಡಿಯು ಜಗತ್ತಿನೊಳಗಿನ ಬೇರೆ ಬೇರೆ ವಸ್ತುಗಳ ಉತ್ಪಾದನೆಗೆ ಎಷ್ಟು ಅನ್ವಯಿಸುವದೋ, ಅದಕ್ಕಿಂತಲೂ ಹೆಚ್ಚು, ಸಾಹಿತ್ಯದ ಕ್ಷೇತ್ರದಲ್ಲಿ ಅನೇಕ ಕಾಲಕ್ಕೆ ಸಾರ್ಥಕವೆನಿಸುತ್ತದೆ. ಕೈ. ರಾವೀಂದ್ರನಾಥ ಟಾಗೋರರು ವಿಪುಲ ವಾಗಿ ಸಾಹಿತ್ಯ ನಿರ್ಮಿತಿಯನ್ನು ಮಾಡಿದ್ದರು; ಆದರೆ ಯಾರ ಲಕ್ಷ್ಯಕ್ಕೂ ಅದು ಬಂದಿರಲಿಲ್ಲ. ಯಾವಾಗ ಅವರಿಗೆ 'ನೋಬಲ ಪ್ರಾಈಝು' ಕೊಟ್ಟು, ಪಾಶ್ಚಿಮಾತ್ಯರು ಅವರ ಗೌರವಮಾಡಿದರೋ ಆಗ ಕೈ. ರಾವೀಂದ್ರನಾಥರಂಥ ಲೇಖಕರು ನಮ್ಮಲ್ಲಿ ಎಲ್ಲಿರುವರೆಂಬ ಅರಿವು ನಮಗಾಯಿತು. ಬಹುತರ ಇದೇ ಪರಿಸ್ಥಿತಿಯು ಶ್ರೀ. ಅಣ್ಣಾರಾಯ ಮಿರ್ಜಿಯವರದೂ ಆಗಿದೆ. 'ಕನ್ನಡ ಸಾಹಿತ್ಯ ಪರಿಷತ್ತು' ಇವರ 'ನಿಸರ್ಗ' ಕಾದಂಬರಿಗೆ ಕ್ರಿ. ಶ. ೧೯೪೬ ನೆಯ ವರ್ಷದ ಕನ್ನಡ ಭಾಷೆಯೊಳಗಿನ ಸರ್ವೋತ್ಕೃಷ್ಟ ಕಾದಂಬರಿಯೆಂದು, ಪ್ರಥಮ ವರ್ಗದ ಪಾರಿತೋಷಕವನ್ನು ಕೊಟ್ಟು, ಹರವನಹಳ್ಳಿ ಸಾಹಿತ್ಯ ಸಮ್ಮೇಲನದಲ್ಲಿ ಇವರನ್ನು ಗೌರವಿಸದೆ ಇದ್ದರೆ, ಇಂಥ ಪ್ರಭಾವೀ ಲೇಖಕರು ನಮ್ಮ ಜೈನಸಮಾಜದಲ್ಲಿ ಇದ್ದಾರೆಂಬ ಕಲ್ಪನೆಯೂ ಕೂಡ ನಮಗೆ ಬರು ತ್ತಿರಲಿಲ್ಲ. ಕೇವಲ ಕರ್ನಾಟಕ ಸಾಹಿತ್ಯ ಪರಿಷತ್ತಷ್ಟೇ ಇವರನ್ನು ಗೌರವಿಸಿ ತೆಂದಲ್ಲ. ಮೈಸೂರು ಸರಕಾರವೂ ಇವರಿಗೆ 'ದೇವರಾಜ' ಬಹುಮಾನವನ್ನು ನಲ್ಲಿಸಿತು. ಧಾರವಾಡದ ವಿದ್ಯಾವರ್ಧಕ ಸಂಘವೂ ಇವರನ್ನು ವಿಶೇಷವಾಗಿ ಸನ್ಮಾನಿಸಿತು. ಆಗ ಕನ್ನಡ ಭಾಷೆಯ ಕಾದಂಬರೀಕ್ಷೇತ್ರದಲ್ಲಿ ಹೊಸ ಯುಗವನ್ನು ಆರಂಭ ಮಾಡುವ ತರುಣ ಲೇಖಕರೆಂದು ಎಲ್ಲ ಕನ್ನಡ ಮತ್ತು 'ಹಿಂದು' ದಂಥ ಇಂಗ್ಲಿಷ ಪತ್ರಿಕೆಯು ಅಭಿಪ್ರಾಯವನ್ನು ವ್ಯಕ್ತವಡಿಸಿತು. 'ದಿ ಇಂಡಿಯನ್ ಪಿ. ಇ. ಎನ್.' ದಂಥ ಹೊಣೆಗಾರ ನಿಯತಕಾಲಿಕೆಯಲ್ಲಿ, ಕನ್ನಡದ ಪ್ರಾಧ್ಯಾಪಕರಾದ ಶ್ರೀ. ಎಸ್. ಎಸ್. ಮಾಳವಾಡ, ಎಂ. ಎ., ಇವರಂತೂ ಕರ್ನಾಟಕದಲ್ಲಿ ಇತ್ತೀಚೆಗೆ ಪ್ರಕಟವಾದ ಕಾದಂಬರಿಗಳಲ್ಲಿ 'ನಿಸರ್ಗ'ವು ಹೇಗೆ ಸರ್ವೋತ್ತಮವಾಗಿದೆ ಎಂಬುದನ್ನು ದಿಗ್ದರ್ಶಿಸಿ, ಆ

ಕಾದಂಬರಿಯ ನಾಯಿಕೆ 'ತಾರಾ' ಎಂಬವಳು ಕನ್ನಡ ಕಾದಂಬರೀ ವಾಙ್ಮಯ ದಲ್ಲಿ, ಮೊದಲ ತರಗತಿಯ ನಾಯಿಕೆಯಾಗಿ ನಿಲ್ಲುವಳೆಂದು ಹೇಳಿದ್ದಾರೆ.

ಇಂಥ ಈ ಪ್ರಥಿತಯಶ ಲೇಖಕರ ಜನ್ಮವು ದಿನಾಂಕ ೨೫ ಅಗಸ್ಟ ೧೯೧೮ನೆಯ ಇಸ್ವಿಯಂದು ಆಯಿತು. ಇವರ ಜನ್ಮಸ್ಥಳವು ಸೇಡಬಾಳ (ಬೆಳಗಾಂವಿ ಜಿಲ್ಲೆ) ಗ್ರಾಮವಾಗಿವೆ. ಇವರ ಮನೆತನದಲ್ಲಿ ಒಕ್ಕಲತನವು ಪರಂಪರಾಗತವಾಗಿ ನಡೆದು ಬಂದ ಉದ್ಯೋಗವಾಗಿದೆ. ಕೃಷಿಯ ಕಡೆಗೆ ಒಲವಿದ್ದ ಮನೆತನ, ಅದರಲ್ಲಿ ಅಣ್ಣಾರಾಯ ಒಬ್ಬನೇ ಮನೆತನಕ್ಕೆ ಮಗನು; ಇದರಿಂದಾಗಿ ಸ್ವಾಭಾವಿಕವಾಗಿಯೇ ಇವರ ಶಿಕ್ಷಣವು ಹೆಚ್ಚಿಗೆ ಆಗಲಿಲ್ಲ. ಕ್ರಿ. ಶ. ೧೯೩೫ರಲ್ಲಿ ಕನ್ನಡ ಪ್ರಾಯಮರಿ ಸ್ಕೂಲ ಲೀವ್ಹಿಂಗ ಸರ್ಟಿಫಿಕೇಟಿನ ಪರೀಕ್ಷೆಯಲ್ಲಿ ಪಾಸ ಆಗಿ, ಊರಲ್ಲಿರುವ ಸಂಸ್ಕೃತ ಪಾಠಶಾಲೆಯಲ್ಲಿ ಹಿಂದಿ, ಪ್ರಾಕೃತ ಮತ್ತು ಸಂಸ್ಕೃತ ಭಾಷೆಗಳ ಅಭ್ಯಾಸವನ್ನು ಕೆಲವು ವರ್ಷ ಮಾಡಿದರು. ಕ್ರಿ. ಶ. ೧೯೩೯ರಿಂದ ಇವರು ಪ್ರಾಥಮಿಕ ಶಿಕ್ಷಕ ವೃತ್ತಿಯನ್ನು ಸ್ವೀಕರಿಸಿದರು. ಅಂದಿನಿಂದ ಇವರು ಆರಂಭಿಸಿದ ಲೇಖನ ಕಾರ್ಯವು ಅವ್ಯಾಹತವಾಗಿ ಇಂದಿಗೂ ನಡೆಯುತ್ತಿದೆ. ಇವರ ಆರಂಭದ ಲೇಖನಗಳು ಜಯಂತಿ, ಜೀವನ, ಜಯಕರ್ನಾಟಕ ಮಾಸಪತ್ರಿಕೆಗಳಲ್ಲಿ ಪ್ರಸಿದ್ಧವಾಗಿವೆ. ಇವುಗಳಲ್ಲಿ ಇವರ ಪ್ರತಿಭೆಯು ಕಂಡುಬಂದುದರಿಂದ ಕವಿಭೂಷಣ ಬೆಟಗೇರಿ ಕೃಷ್ಣಶರ್ಮ, ಪ್ರಾಧ್ಯಾಪಕ ರಂ. ಶ್ರೀ ಮುಗಳಿ, ಪ್ರಿನ್ಸಿಪಾಲ ವಿ. ಕೆ. ಗೋಕಾಕ ಇವರು ಶ್ರೀ ಮಿರಜಿಯವರಿಗೆ ಪ್ರೋತ್ಸಾಹ ಕೊಟ್ಟು, ಕಾಲಕಾಲಕ್ಕೆ ಮಾರ್ಗದರ್ಶನ ಮಾಡಿದರು. ಇವರ ಬರವಣಿಗೆಯು ಒಂದೇ ಸವನೆ ಸಾಗಿದ್ದರೂ ಅದಕ್ಕೆ ಸಾರ್ವಜನಿಕ ಮಾನ್ಯತೆಯು ಇನ್ನೂ ಲಭಿಸಿರಲಿಲ್ಲ. ಸುದೈವದಿಂದ ಆ ಪ್ರಸಂಗವು ಬಹಳ ಬೇಗನೆ ಒದಗಿತು. ಕ್ರಿ. ಶ. ೧೯೪೫ನೆಯ ವರ್ಷ, ಕರ್ನಾಟಕ ಸಾಹಿತ್ಯ ಪರಿಷತ್ತಿನಿಂದ ಒಂದು ಪ್ರಬಂಧದ ಮೇಲಾಟ ವನ್ನು ಇಡಲಾಗಿತ್ತು. ನಿಬಂಧದ ವಿಷಯವು 'ಕನ್ನಡ ಭಾಷೆಯಲ್ಲಿ ಜೈನ ಸಾಹಿತ್ಯಿತರ ಸ್ಥಾನ', 'ಕನ್ನಡ ಭಾಷೆಯಲ್ಲಿ ವೀರಶೈವ ಸಾಹಿತ್ಯಿತರ ಸ್ಥಾನ' ಮತ್ತು 'ಕನ್ನಡ ಭಾಷೆಯಲ್ಲಿ ಬ್ರಾಹ್ಮಣ ಸಾಹಿತ್ಯಿತರ ಸ್ಥಾನ'—ಎಂದು ಕೊಡ ಲಾಗಿತ್ತು. ಇವುಗಳಲ್ಲಿ ಮೊದಲನೆಯ ವಿಷಯವನ್ನು ಮಿರ್ಜಿಯವರು ಆಯ್ದು ಕೊಂಡು, ಪ್ರಬಂಧ ಬರೆದು, ಪರಿಷತ್ತಿನ ಪ್ರಥಮ ತರಗತಿಯ ಬಹುಮಾನ ವನ್ನು ಪಡೆದರು. ಈ ಸಂಶೋಧನಾತ್ಮಕ ಪ್ರದೀರ್ಘ ನಿಬಂಧವು ಕ್ರಮಶಃ

ಧಾರವಾಡದ 'ಜಯಕರ್ನಾಟಕ'ದಲ್ಲಿ ಪ್ರಸಿದ್ಧವಾಗಿದೆ. ಅದರ ಹಿಂದೀ ಭಾಷಾಂತರವು ಬಿಹಾರದ ವಿದುಷೀರತ್ನ ಬ್ರಹ್ಮಚಾರಿ ಪಂಡಿತಾ ಚಂದಾಬಾಯಿ ಅಭಿನಂದನ ಗ್ರಂಥದಲ್ಲಿ ಪ್ರಕಟವಾಗಿದೆ.

ಮಿರ್ಜಿ ಅಣ್ಣಾರಾಯರ ಕೀರ್ತಿಗೆ ಶೋಭಿಸುವಂತೆ ಅವರ ಲೇಖನ ಪ್ರಪಂಚವಿದೆ. ಮೇಲೆ ನಿರ್ದೇಶಿಸಿದ 'ನಿಸರ್ಗ' ಕಾದಂಬರಿಯ ತರುವಾಯ ಇವರು 'ರಾಷ್ಟ್ರಪುರುಷ' ಎಂಬ ಹೆಸರಿನ ೭೨೦ ಪುಟಗಳ ದೊಡ್ಡ ಕಾದಂಬರಿಯೊಂದನ್ನು ಪ್ರಕಟಿಸಿದರು. ಜೈನ ವಾತಾವರಣದ ಮೇಲೆ ರೂಪುಗೊಂಡು, ರಾಷ್ಟ್ರೀಯತ್ವವನ್ನು ಪ್ರತಿಬಿಂಬಿಸುವುದೇ ಇದರ ವೈಶಿಷ್ಟ್ಯವಾಗಿದೆ. ಕ್ರಿ. ಶ. ೧೯೨೦ರಿಂದ ೪೭ರ ವರೆಗೆ ಬೇರೆ ಬೇರೆ ರಾಜಕೀಯ ಪ್ರಸಂಗಗಳಲ್ಲಿ, ಒಂದು ಹಳ್ಳಿಯ ಜೈನಗೌಡರ ಮನೆತನದಲ್ಲಿ ಏನೇನು ವ್ಯತ್ಯಾಸವಾಗುತ್ತ ಹೋಯಿತೆಂಬುದರ ಮಾರ್ಮಿಕ ಚಿತ್ರಣವು 'ರಾಷ್ಟ್ರಪುರುಷ'ದಲ್ಲಿದೆ. ಕನ್ನಡದ ಸುಪ್ರಸಿದ್ಧ ಕವಿ 'ಅಂಬಿಕಾತನಯದತ್ತ' (ಪ್ರಾ. ದ. ರಾ. ಬೇಂದ್ರೆ) ಇವರ ಸಮಗ್ರ ಕಾವ್ಯವನ್ನು ವಿಮರ್ಶಿಸುವ 'ದತ್ತವಾಣಿ' ಎಂಬ ಪ್ರಬಂಧವನ್ನು ಇವರು ಇದೀಗ ಬರೆದು ಪ್ರಕಟಿಸಿದ್ದಾರೆ. ಇದರಂತೆಯೇ ಸಾಹಿತ್ಯದ ಕಾದಂಬರಿ, ಸಣ್ಣಕಥೆ, ನಾಟಕ, ಪ್ರಬಂಧ, ಭಾವಗೀತೆ ಮತ್ತು ವಿಮರ್ಶೆಯೇ ಮೊದಲಾದ ವಿವಿಧ ವಿಭಾಗಗಳನ್ನು ಸಾಂಗೋಪಾಂಗವಾಗಿ ಚರ್ಚಿಸುವ 'ಲೇಖನಕಲೆ' ಎಂಬ ಗ್ರಂಥವನ್ನು ತಮ್ಮ ಸ್ವಂತ ಪ್ರಕಾಶನ ಸಂಸ್ಥೆಯಾದ ನೇಡಬಾಳದ 'ಶಾಂತಿಸೇವಾಸದನ'ದಿಂದ ಪ್ರಸಿದ್ಧಮಾಡಿದ್ದಾರೆ. ಇತರ ಲಲಿತ ವಾಙ್ಮಯ ರಚನೆಯ ಜೊತೆಯಲ್ಲಿಯೇ ಇವರು ಧಾರ್ಮಿಕಸ್ವರೂಪದ ಸಾಹಿತ್ಯವನ್ನೂ ನಿರ್ಮಿಸಿದ್ದಾರೆ. ಇಂಥವುಗಳಲ್ಲಿ 'ಚಿನ್ಮಯಚಿಂತಾಮಣಿ' ಎಂಬ ಗ್ರಂಥದ ಸಂಪಾದನ ಹಾಗೂ ವ್ಯಾಖ್ಯಾನವು ಮುಖ್ಯವಾಗಿದೆ. ಇದು ಕನ್ನಡದಲ್ಲಿ ಮೂಲ ಕಲ್ಯಾಣಕೀರ್ತಿ ಆಚಾರ್ಯರ ಕೃತಿಯಾಗಿದೆ. ಮತ್ತು 'ದಶಭಕ್ತಿ'ಯಲ್ಲಿ ಭಗವದ್ ಜಿನಸೇನಾಚಾರ್ಯ, ಮಾನತುಂಗಾಚಾರ್ಯ, ಸಮಂತಭದ್ರಾಚಾರ್ಯ, ಕುಂದಕುಂದಾಚಾರ್ಯ, ಪೂಜ್ಯಪಾದಾಚಾರ್ಯ ಮತ್ತು ಉಮಾಸ್ವಾಮಿ, ಸಿದ್ಧಸೇನದಿವಾಕರ ಮೊದಲಾದ ಜೈನ ಕವಿಗಳ ಸ್ತೋತ್ರಸಾಹಿತ್ಯವನ್ನೂ ಅಧ್ಯಾತ್ಮಿಕಗ್ರಂಥಗಳನ್ನೂ ಕನ್ನಡದಲ್ಲಿ ಭಾಷಾಂತರಿಸಿ, ಪ್ರತಿಯೊಂದು ಕೃತಿಯ ಭಾವಭೂಮಿಕೆಯನ್ನು ಸ್ಪಷ್ಟವಾಗಿ ತಿಳಿಸಿ ಹೇಳಿದ್ದಾರೆ

ಶ್ರೀ ಅಣ್ಣಾರಾಯರು ತಮ್ಮ ಇಲ್ಲಿಯ ವರೆಗಿನ ಲೇಖನಗಳಿಂದ ಯಾವ ಕೀರ್ತಿಯನ್ನು ಸಂಪಾದಿಸಿರುವರೋ, ಅದನ್ನು ಉಳಿಸಿಕೊಳ್ಳುವ ಇಲ್ಲವೆ ಹೆಚ್ಚಿಸುವಂಥ ನವೀನ ಗ್ರಂಥಗಳನ್ನು ಬರೆದಿದ್ದಾರೆ. ಅವುಗಳಲ್ಲಿ 'ಪ್ರತಿ ಸರಕಾರ', 'ರಾಮಣ್ಣ ಮಾಸ್ತರ', 'ಅಶೋಕಚಕ್ರ'ಗಳು ಕಾದಂಬರಿಗಳಾಗಿವೆ. ಇವುಗಳಲ್ಲಿ ಮೊದಲನೆಯದು ರಾಜಕೀಯ ಕಾದಂಬರಿಯಾಗಿದೆ; ಉಳಿದ ವೆರಡು ಸಾಮಾಜಿಕವಾಗಿವೆ ಇವಲ್ಲದೆ 'ಪ್ರಣಯ ಸಮಾಧಿ', 'ವಿಜಯಶ್ರೀ' ಎಂಬ ಎರಡು ಲಘು ಕಥಾಸಂಗ್ರಹಗಳೂ ಅಚ್ಚಿನಲ್ಲಿವೆ. ಹಾಗೆಯೇ 'ಸಮಂತಭದ್ರರ ಸಮಾಜಶಾಸ್ತ್ರ' ಎಂಬ ಶಾಸ್ತ್ರೀಯ ಪ್ರಬಂಧ, 'ಜೀವನದಲ್ಲಿ ದರ್ಶನೋದಯ'ವೆಂಬ ಭಗವದ್‌ಗೀತೆಯ ವಿವೇಚನೆ ಮತ್ತು 'ಸೃಷ್ಟಿಯಲ್ಲಿ ಶಿವಾನುಭವ'ವೆಂಬ ವೀರಶೈವ ಸಾಹಿತ್ಯಸಮಾಲೋಚನೆ ಇವುಗಳನ್ನು ಮುಖ್ಯ ವಾಗಿ ಇಲ್ಲಿ ಉಲ್ಲೇಖಿಸಬೇಕು.

ಯಾವ ಕನ್ನಡ ಭಾಷೆಯನ್ನು ಪಂಪ, ರನ್ನರಂಥ ಜೈನ ಕವಿಗಳು ಸಮೃದ್ಧಗೊಳಿಸಿದರೋ ಮತ್ತು ಬೇರೆ ಬೇರೆ ಆಚಾರ್ಯರು ಅಪರಿಮಿತ ಗ್ರಂಥಗಳನ್ನು ನಿರ್ಮಿಸಿ, ಅದನ್ನು ಸಂರಕ್ಷಿಸಿದರೋ ಆ ಕನ್ನಡ ಭಾಷೆಯಲ್ಲಿ ಜೈನರ ಹಕ್ಕುಬಾಧ್ಯತೆಗಳನ್ನೂ ಸ್ಥಾನಮಾನಗಳನ್ನೂ ಕಾಪಾಡಿಕೊಳ್ಳುವಂಥ ಚತುರಸ್ರ ಲೇಖಕನು ಆಧುನಿಕ ಕಾಲದಲ್ಲಿ ಜನಿಸಿರಲಿಲ್ಲ. ಆ ಕೊರತೆಯನ್ನು ಶ್ರೀ ಮಿರ್ಜಿಯವರು ಚೆನ್ನಾಗಿ ತುಂಬಿ ತಂದಿದ್ದಾರೆ. ಈ ಲೋಕಪ್ರಿಯ ಲೇಖಕರ ವ್ಯಾಸಂಗವನ್ನು ನೋಡಿದರೆ ಈಗಲೂ ಜೈನಸಮಾಜವು ತೀರ ನಿಃಸತ್ವವಾಗಿಲ್ಲವೆಂದು ಎನಿಸುತ್ತದೆ. ಇನ್ನೂ ಕೂಡ ಜೈನ ಜನಾಂಗದಲ್ಲಿ ಮಾನಮರ್ಯಾದೆಯ ಸ್ಥಾನವನ್ನು ಪಡೆಯುವ ವ್ಯಕ್ತಿಗಳು ಹುಟ್ಟುವರು. ಮಿರ್ಜಿ ಅಣ್ಣಾರಾಯರ ಉದಾಹರಣೆಯೊಂದು ಸಮಾಜದಲ್ಲಿ ಆಶಾವಾದವನ್ನು ಪಸರಿಸಿ, ಜೈನತರುಣರು ವಾಙ್ಮಯಕ್ಷೇತ್ರದಲ್ಲಿ ಪ್ರವೇಶಿಸಿದರೆ ನಿಶ್ಚಿತವಾ ಗಿಯೂ ಕನ್ನಡ ಸಾಹಿತ್ಯದಲ್ಲಿ ಇಷ್ಟೇ ಅಲ್ಲ, ಭಾರತೀಯ ಸಾಹಿತ್ಯಪ್ರಪಂಚ ದಲ್ಲಿಯೇ ಜೈನತ್ವದ ಪ್ರತಿಭೆಯು ಹಿಂದಿನಂತೆ ಮತ್ತೆ ಬೆಳಗಬಹುದೆಂದು ತೋರುತ್ತದೆ. ಈ ಆಶೆಯು ಅಪ್ರಸ್ತುತವೆಂದು ಎನಿಸುವದಿಲ್ಲ. ಜೈನ ಸಮಾಜದ ದೃಷ್ಟಿಯಿಂದ ಮಿರ್ಜಿಯವರು ಲೇಖಕರಷ್ಟೇ ಅಲ್ಲ; ಅದಕ್ಕೂ ಹೆಚ್ಚಾಗಿ ಸಮಾಜದ ಉತ್ಸಾಹೀ ಕಾರ್ಯಕರ್ತರಾಗಿದ್ದಾರೆ. ಈ ಮಾತಿಗೆ ಹೆಚ್ಚು ಮಹತ್ವವಿದೆ. ತಮ್ಮ ಸಮಾಜದ ಪರಿಸ್ಥಿತಿಯು ಸುಧಾರಿಸಬೇಕೆಂದೂ

ಅವರ ಅಪೇಕ್ಷೆಯಿದ್ದು, ಆ ದಿಸೆಯಲ್ಲಿ ಅವರು ಪ್ರಯತ್ನವನ್ನೂ ಮಾಡುವವರಿದ್ದಾರೆ. ಇವರಂಥ ಪ್ರಭಾವೀ ಲೇಖಕರು ಈ ಸಮಾಜ ಸುಧಾರಣೆಯ ಹೊಣೆಯನ್ನು ಹೊತ್ತರೆ ಸಮಾಜದಲ್ಲಿ ಕ್ರಾಂತಿಯು ಉಂಟಾಗಲಿಕ್ಕೆ ಬಹಳ ಕಾಲವು ಹಿಡಿಯಲಿಕ್ಕಿಲ್ಲವೆಂದು ವಿಶ್ವಾಸಹುಟ್ಟುತ್ತಿದೆ. ಇದರಂತೆಯೇ ಕನ್ನಡದಲ್ಲಿ ಅಪರಿಮಿತ ಅಪ್ರಕಾಶಿತ ಮತ್ತು ಎಲ್ಲೆಡೆಗೂ ಪಸರಿಸಿದ ಜೈನ ವಾಙ್ಮಯದ ಸಂಶೋಧನೆಯಾಗುವದು ಅತ್ಯವಶ್ಯವಾಗಿದೆ. ಈ ದಿಸೆಯಲ್ಲಿಯೂ ಶಕ್ಯವಿದ್ದಷ್ಟು ಪ್ರಯತ್ನಮಾಡುವ ಇಚ್ಛೆಯನ್ನು ಅಣ್ಣಾರಾಯರು ವ್ಯಕ್ತಪಡಿಸಿದ್ದಾರೆ. ಈ ಕಾರ್ಯವು ಅವರ ಕೈಯಿಂದ ಬೇಗನೆ ಆಗಲೆಂದು ಎಲ್ಲರೂ ಅಪೇಕ್ಷಿಸುತ್ತಿದ್ದರೆ ಆಶ್ಚರ್ಯದ ಸಂಗತಿಯಲ್ಲ.

ಕನ್ನಡ ಭಾಷೆಯ 'ಜಿನವಿಜಯ'ಕ್ಕೆ ಸಂಪಾದಕರೆಂದು ಶ್ರೀ ಮಿರ್ಜಿ ಅಣ್ಣಾರಾಯರಂಥ ಲೋಕಮಾನ್ಯ ಪ್ರಭಾವೀ ಲೇಖಕರು ಲಭಿಸಿದ್ದು, ಜೈನ ಸಮಾಜದ ಭಾಗ್ಯವಾಗಿದೆ. ಸಮಾಜದ ಬಹಳಷ್ಟು ಆಶೆ, ಆಕಾಂಕ್ಷೆಗಳು ಇವರಲ್ಲಿ ಕೇಂದ್ರಿತವಾಗಿವೆ. ಅವು ಅಣ್ಣಾರಾಯರಿಂದ ಬೇಗನೇ ಪೂರೈಸಲ್ಪಡಲೆಂದು ನಮ್ಮ ಮನೀಷೆಯಿದೆ. ಮಿರ್ಜಿಯವರು ಆಗಾಗ ಹೇಳುವರು: "ಕನ್ನಡ ಭಾಷೆಯಲ್ಲಿ ಪ್ರಭುತ್ವವನ್ನು ಪಡೆಯುವ ಲೇಖಕರು ನಮ್ಮ ಸಮಾಜದಲ್ಲಿ ಅನೇಕ ಜನರು ಹೊರಡಬಹುದು; ಆದರೆ ಅವರಿಗೆ ಯೋಗ್ಯ ಅವಕಾಶವು ಲಭಿಸುತ್ತ ಇಲ್ಲ." ಈಗ ಶ್ರೀ ಮಿರ್ಜಿಯವರ ಮಾರ್ಗದರ್ಶನದಲ್ಲಿ ನವೀನ ಲೇಖಕರ ಪರಂಪರೆಯು ನಿರ್ಮಾಣವಾದಲ್ಲಿ ಬಹಳ ದೊಡ್ಡ ಕಾರ್ಯವು ಆದಂತೆ ಆಗುತ್ತದೆ. ಈಗಿನ ಯುಗದಲ್ಲಿ ಲೇಖನದ ಮಾಧ್ಯಮದಿಂದ ವಿಚಾರ ಕ್ರಾಂತಿಯನ್ನುಂಟುಮಾಡಲು ಸುಲಭವಾಗುತ್ತದೆ. ವಿಚಾರಕ್ರಾಂತಿಯೇ ಎಲ್ಲ ಸುಧಾರಣೆಯ ಅಸ್ತಿವಾರವಾಗಿದೆ. - ಅಂದ ಮೇಲೆ ಕರ್ನಾಟಕದೊಳಗಿನ ಜೈನಸಮಾಜದಲ್ಲಿ ವಿಚಾರಕ್ರಾಂತಿಯನ್ನು ಮಾಡುವ ದೊಡ್ಡ ಹೊಣೆಯನ್ನು ಇವರು ಹೊತ್ತಿದ್ದಾರೆ. ಅದನ್ನು ಇವರು ಯೋಗ್ಯರೀತಿಯಿಂದ ಮುಂದರಿಸುವರೆಂಬುದರಲ್ಲಿ ನಮಗೆ ವಿಶ್ವಾಸವೆನಿಸುತ್ತದೆ.

# ಪ್ರತಿಭೆಯು ಪ್ರಭೆಯಲ್ಲಿ : ಅಣ್ಣಾರಾಯರು

(ಒಂದು ರೇಡಿಯೋ ಸಂದರ್ಶನ*)

**ಸಂದರ್ಶಕ:**— ಅಣ್ಣಾರಾಯರೆ, ತಾವು ಈಗ ಕಾದಂಬರಿಕಾರರೆಂದು ಹೆಸರು ಗಳಿಸಿದ್ದೀರಿ; ಕಾದಂಬರಿ ರಚಿಸುವ ಮೊದಲು ಇನ್ನಾವುದಾದರೂ ಬಗೆಯ ಸಾಹಿತ್ಯ ರಚನೆಗೆ ಕೈಹಾಕಿದ್ದಿರಾ?

**ಅಣ್ಣಾರಾಯ:**— ನಾನು ಕಾದಂಬರಿಗಳನ್ನು ರಚಿಸುವ ಮೊದಲು ಪತ್ರಿಕೆಗಳಿಗೆ ಸಣ್ಣ ಕತೆಗಳನ್ನು ಬರೆಯುತ್ತಿದ್ದೆ. ಈಗಲೂ ಆಗಾಗ ಬರೆಯುತ್ತಿರುವೆ. ನನ್ನ 'ಪ್ರಣಯ ಸಮಾಧಿ', 'ವಿಜಯಶ್ರೀ'ಗಳೆಂಬ ಕಥಾ ಸಂಗ್ರಹಗಳು ಪ್ರಕಟವಾಗಿವೆ.

**ಸಂದರ್ಶಕ:**— ಕಾದಂಬರಿಗಳ ಕಡೆಗೆ ನಿಮ್ಮ ಮನಸ್ಸು ಹೇಗೆ ಹರಿಯಿತು?

**ಅಣ್ಣಾರಾಯ:**— ಜೀವನದೊಳಗಿನ ರಸ-ವಿಷ ನಿಮಿಷಗಳನ್ನು ಸಣ್ಣ ಕತೆಗಳಲ್ಲಿ ಚಿತ್ರಿಸಲಿಕ್ಕೆ ಸಾಧ್ಯ. ಇದನ್ನು ಮಾಡುತ್ತಿರುವಾಗ ಸುತ್ತಲಿನ ಜೀವನವನ್ನು ನೋಡುವ ಒಂದು ದೃಷ್ಟಿಯು ನನ್ನಲ್ಲಿ ಉತ್ಪನ್ನವಾಯಿತು. ಅದರೊಡನೆ ನನ್ನ ಹೃದಯವು ಜೀವನದಲ್ಲಿಯ ವಿವಿಧ ತೆರೆಗಳಿಂದ ಅಲ್ಲೋಲ ಕಲ್ಲೋಲವಾಗತೊಡಗಿತು. ಅದರಿಂದಾಗಿ ನನ್ನಿಂದ ಸುತ್ತಲಿನ ಸಮಾಜದ ಮೇಲೆ ಕಾಯಿಕ, ವಾಚಿಕ ಮತ್ತು ಮಾನಸಿಕ ಪ್ರತಿಕ್ರಿಯೆಗಳು ನಡೆಯಹತ್ತಿದವು. ಅದಕ್ಕೆ ಉತ್ತರರೂಪದಲ್ಲಿ ಸಮಾಜದಿಂದ ಉಂಟಾಗುವ ಪ್ರತಿಕ್ರಿಯೆಗಳು ನನ್ನನ್ನು ಕೆರಳಿಸಹತ್ತಿದವು. ಇದರಿಂದ ನನ್ನ ಅನುಭವ ವಿಶಾಲವಾಗುವುದರೊಡನೆ, ಸಾಮಾಜಿಕ ಸಮಸ್ಯೆಗಳೆಲ್ಲ ತಮ್ಮಷ್ಟಕ್ಕೆ ತಾವು ಸ್ವತಂತ್ರವಾಗಿರದೆ, ಒಂದಕ್ಕೆ ಇನ್ನೊಂದು ಕಾರಣೀಭೂತವಾಗಿರುತ್ತವೆ; ಜೀವನವನ್ನು ಸಮಗ್ರದೃಷ್ಟಿಯಿಂದಲೆ ಕಾಣಬೇಕೆಂಬ ಅರಿವು ಉಂಟಾಯಿತು.

---

*ಆಲ್ ಇಂಡಿಯಾ ರೇಡಿಯೋದ ಮುಂಬೈ ಸ್ಟೇಶನ್‌ದವರು ಶ್ರೀ ಮಿರ್ಜಿ ಅಣ್ಣಾರಾಯರ ಸಂದರ್ಶನ ತಕ್ಕೊಂಡು ತಮ್ಮ ರೇಡಿಯೋ ಸ್ಟೇಶನದಿಂದ ದಿನಾಂಕ ೧೭– ಜುಲೈ ೧೯೫೬ ಇಸ್ವಿಯಂದು ಬಿತ್ತರಿಸಿದರು. ಅದನ್ನೇ ಇಲ್ಲಿ ಅವರ ಅಪ್ಪಣೆಯಿಂದ ಪ್ರಕಟಿಸಲಾಗಿದೆ. —ಸಂಪಾದಕ.

ಈ ಅರಿವು ನನ್ನನ್ನು ಸಣ್ಣ ಕತೆಗಾರಿಕೆಯಿಂದ ಕಾದಂಬರೀ ಕ್ಷೇತ್ರಕ್ಕೆ ತಂದು ಬಿಟ್ಟಿತು.

**ಸಂದರ್ಶಕ:**—ತಾವು ಬರೆದ ಕಾದಂಬರಿಗಳಲ್ಲಿ ಮೊದಲನೆಯದು ಯಾವುದು? ಅದನ್ನು ಬರೆಯಲು ಕಾರಣವೇನು?

**ಅಣ್ಣಾರಾಯ:**—ನಾನು ಬರೆದ ಕಾದಂಬರಿಗಳಲ್ಲಿ "ನಿಸರ್ಗ" ಮೊದಲನೆಯದು. ಅದರಲ್ಲಿ ಅನಂತ ತಾರೆಯರೆಂದು ವ್ಯಕ್ತವಾಗಿರುವ ಪಾತ್ರಗಳ ಜೀವನವನ್ನು ನಾನು ಸಣ್ಣವನಾಗಿರುವಾಗಿನಿಂದಲೂ ನೋಡಿ, ನೊಂದು ಕೊಳ್ಳುತ್ತ ಬಂದಿದ್ದೆ. ಆ ಅನುಭವವು ನನ್ನ ಮನಸ್ಸಿನ ಮೇಲೆ ಗಾಢವಾದ ಪರಿಣಾಮವನ್ನು ಮಾಡಿತ್ತು. ಈ ದುರಂತವನ್ನು ಜನರು ಕಾಣರಲ್ಲ!—ಎಂಬ ಕೊರಗು ಹೃದಯವನ್ನು ಕೊರೆಯುತ್ತಿದ್ದಿತು. ಇದನ್ನೊಮ್ಮೆ ಲೋಕಕ್ಕೆ ಹೇಳಿಬಿಡದೆ ನನಗೆ ಶಾಂತಿಯಿಲ್ಲ, ಸಮಾಧಾನವಿಲ್ಲ. ಎಂಬ ಅನಿವಾರ್ಯ ಒತ್ತಡಕ್ಕೊಳಗಾಗಿ ಈ ಕಾದಂಬರಿಯನ್ನು ಬರೆದೆ. ಕಾದಂಬರಿ ರಚನೆಯ ಯಾವ ಯೋಜನೆಯನ್ನೂ ಇಟ್ಟುಕೊಳ್ಳದೆ, ಇದ್ದುದಿದ್ದಂತೆ ನೈಸರ್ಗಿಕ ರೀತಿಯಲ್ಲಿ ಕೃತಿಯನ್ನು ಬಿತ್ತರಿಸಿದೆ.

**ಸಂದರ್ಶಕ:**—ಆಂದರೆ, 'ರಾಷ್ಟ್ರ ಪುರುಷ' ಕಾದಂಬರಿಯನ್ನು ಬರೆಯುವಾಗ ನೀವು ತಂತ್ರದ ಕಡೆಗೆ ಗಮನಕೊಟ್ಟಂತಾಯಿತೇನು?

**ಅಣ್ಣಾರಾಯ:**—ಅಹುದು; ನಿಸರ್ಗದ ನಂತರ ರಚಿಸಿದ 'ರಾಷ್ಟ್ರ ಪುರುಷ'ದ ಬರವಣಿಗೆಯ ಕಾಲಕ್ಕೆ ಕಾದಂಬರಿಯ ತಂತ್ರವನ್ನು ತಿಳಿದುಕೊಂಡು, ಅಳವಡಿಸಿಕೊಳ್ಳಲಿಕ್ಕೆ ಯತ್ನಿಸಿದೆ. ನನ್ನ ವಿದ್ಯಾರ್ಥಿ ಜೀವನದಲ್ಲಿ ರಾಷ್ಟ್ರೀಯ ಚಳವಳಿಯ ಪ್ರಭಾವ ನನ್ನ ಮೇಲೆ ಆಗಿತ್ತು. ಕ್ರಿ. ಶ. ೧೯೪೨ರ ಚಳವಳಿಯಲ್ಲಿ ಸ್ವಲ್ಪ ಭಾಗವಹಿಸುವ ಅವಕಾಶಸಿಕ್ಕಿತು. ಹಳ್ಳಿಯ ವತನದಾರ ಗೌಡರ ನೆರೆಯಲ್ಲಿ ಹುಟ್ಟಿದಾಗಿನಿಂದಲೂ ಬೆಳೆದು, ಅವರ ಜೀವನ ರೀತಿಗಳನ್ನು ಅನುಭವಿಸಿದ್ದೆ. ನನ್ನ ಕೆಲವು ಗೆಳೆಯರು ಮುಂಬೈ ಮೊದಲಾದ ಕಡೆಗಳಲ್ಲಿದ್ದು, ವಿವಿಧ ರಾಜಕೀಯ ಗುಂಪುಗಳಲ್ಲಿ ಕೆಲಸಮಾಡುತ್ತಿದ್ದರು. ಅವರಿಂದಾಗಿ, ವಿವಿಧ ಪಾರ್ಟಿಗಳ ಚಟುವಟಿಕೆ ಹಾಗೂ ಆಯಾ ಪಾರ್ಟಿಗಳಲ್ಲಿಯ ಕೆಲಸಗಾರರ ಸಂಬಂಧ ನನಗೆ ಬಂತು. ಇವೆಲ್ಲದಕ್ಕೂ ಹೆಚ್ಚಿನದೆನ್ನುವಂತೆ ಭರತಖಂಡದಲ್ಲಿ ಒಂದು ಅಖಂಡ ಚೈತನ್ಯವಿದೆ. ಅದೊಂದು ಯಾವುದೋ ಸಂಕೇತಕ್ಕಾಗಿ ಒಟ್ಟುಗೂಡುತ್ತಿದೆ.—ಎಂಬ ಅನಿಸಿಕೆಯು ರಾಷ್ಟ್ರ

ಪುರುಷವೆಂಬ ಹೆಸರನ್ನು ಸೂಚಿಸಿ ಹೋಯಿತು. ಆ ಪುರುಷನ ಶಕ್ತಿ ಅಜೇಯವಾಗಿದೆ; ಎನ್ನುವ ಅರಿವು ಅಜಿತನ ಪಾತ್ರ ಸೃಷ್ಟಿಗೆ ಕಾರಣವಾಗಿ ಕಾದಂಬರಿಯು ರೂಪುಗೊಂಡಿತು.

**ಸಂದರ್ಶಕ:**— ಭಾರತದ ಅಖಂಡ ಚೈತನ್ಯದ ಅಜೇಯ ಶಕ್ತಿ ಎಂದಿರಿ. ಇಂಥ ಒಂದು ಮಹಾಶಕ್ತಿಯ ಚಿತ್ರಣ ಬಹು ಕಷ್ಟಸಾಧ್ಯ ಎನಿಸಿರಬೇಕಲ್ಲವೇ ನಿಮಗೆ?

**ಅಣ್ಣಾರಾಯ:**— ಕಷ್ಟಸಾಧ್ಯವೇನು? ಬರೆಯಲಿಕ್ಕೆ ಕುಳಿತಾಗ ಅಸಾಧ್ಯವೇ ಎನಿಸಿತು. ಚಿತ್ರಿಸಬೇಕೆಂದಿರುವ ಚೈತನ್ಯ ಪುರುಷನ ಚಿದ್‌ರೂಪ ಮನದಲ್ಲಿ— ಪ್ರತಿಭೆಯಲ್ಲಿ— ಮೂಡಿ ನಿಂತಿದ್ದರೂ ಹೊರಗಿನ ಭೌತಿಕ ಜೀವನದಲ್ಲಿಯ ಘಟನೆಗಳ ಅನುಭವ ಸಾಲದೆ ಹೋಯಿತು. ಅಖಂಡ ಪ್ರಜ್ಞೆಗೆ ಅನುಗುಣವಾದ ವಿಶಾಲಭಾರತದ ಜೀವನ ಪ್ರಸಂಗಗಳನ್ನು ಅಳವಡಿಸಿಕೊಳ್ಳುವ ಯತ್ನದಲ್ಲಿ ವಿವಿಧ ಭಾಷೆಯ ಸಾಹಿತ್ಯ ಕೃತಿಗಳ ಅವಲೋಕನ, ಋಣ ಹೆಚ್ಚಾಯಿತು. ಆದರೂ ಈ ಕೃತಿನಿರ್ಮಾಣದ ಕಾಲಕ್ಕೇನೇ— ರಾಷ್ಟ್ರಪುರುಷನ ಅಖಂಡ ಶಕ್ತಿಯನ್ನು ಅನುಭವಿಸುತ್ತಿರುವಾಗಲೇ— ಇಂಥ ಪುರುಷನಿಗೆ ಆಧಾರಭೂತವಾಗಿರುವ ಒಂದು ಪ್ರಕೃತಿಯೂ ಇದೆ ಏನೋ ಎಂಬ ತೋರಿಕೆ ಹೊಳೆದುಹೋಯಿತು. ಆ ತೋರಿಕೆಯು ಆಗಾಗ ಮಿಂಚಿ, ಮಿಂಚಿ ಕೆಲದಿನಗಳಲ್ಲಿ ಅಂತರ್ಯದ ಅರಿವಾಗಿ, ಅನಿಸಿಕೆಯು ರೂಪಕ್ಕೆ ತಿರುಗಿತು. ಒಂದು ದಿನ ಅದು ಸ್ತ್ರೀರೂಪದಲ್ಲಿ ನಮ್ಮ ರೈತನೊಬ್ಬನ ಹೆಂಡತಿಯಲ್ಲಿ ಒಂದಂಶ ವ್ಯಕ್ತವಾಗಿರುವಂತೆ ಭಾಸವಾಗತೊಡಗಿತು. ಮುಂದೆ ಅದನ್ನು ಚಿತ್ರಿಸುವ ಯತ್ನದಲ್ಲಿ 'ಪದ್ಮಾವತಿ'ಯ ರೂಪದಿಂದ 'ಅಶೋಕ ಚಕ್ರ' ಕಾದಂಬರಿಯು ರೂಪುಗೊಂಡು ನಿಂತಿತು.

**ಸಂದರ್ಶಕ:**— ಹಾಗಾದರೆ ತಮ್ಮ ಮೊದಲ ಮೂರು ಕಾದಂಬರಿಗಳಿಗೂ ಒಂದು ಅಖಂಡ ಜೀವನಪ್ರಜ್ಞೆಯು ಸ್ಫೂರ್ತಿಯನ್ನು ಕೊಡುತ್ತ ಬಂದಿತು. ಮುಂದೆಯೂ ಹೀಗೆಯೇ ಆಯಿತೇನು?

**ಅಣ್ಣಾರಾಯ:**— ಅಹುದು. 'ಅಶೋಕ ಚಕ್ರ'ದ ಪದ್ಮಾವತಿಯಲ್ಲಿ ಯಾವ ಪ್ರಕೃತಿ ಶಕ್ತಿಯ ಪರಿಚಯವನ್ನು ನಾನು ಪಡೆದೆನೋ, ಮುಂದೆ ಅದನ್ನೇ ನನ್ನ ತಾಯಿ, ಸೋದರತ್ತೆ, ಇಬ್ಬರು ಹೆಂಡಂದಿರಲ್ಲಿಯೂ ಪಡೆದೆ. ಈ ನಾಲ್ಮೊಗದ ಶಕ್ತಿಯನ್ನು ಸಮನ್ವಯಿಸಿಕೊಳ್ಳುವ ಸಾಮರ್ಥ್ಯ ಸಾಲದೆ

ತತ್ತರಿಸಿಹೋದೆ. ಇಂಥ ವಿಘಟನದ ಒಂದು ಸಣ್ಣ ಚಿತ್ರವಾಗಿ ನನ್ನ 'ರಾಮಣ್ಣ ಮಾಸ್ತರು' ರೂಪುಗೊಂಡಿತು. ಪ್ರಕೃತಿಯ ಈ ಶಕ್ತಿಗಳನ್ನು ಸಮನ್ವಯಿಸಿಕೊಂಡು, ಸುಂದರ ಜೀವನವನ್ನು ಕಟ್ಟಬೇಕೆಂಬ ಪೌರುಷದ ಹೋರಾಟದ ಚಿತ್ರವಾಗಿ 'ಶ್ರೇಯಾಂಸ' ಮೂಡಿನಿಂತಿತು. ಈ ಪ್ರಬಲವಾದ ಪ್ರಾಕೃತಿಕ ಶಕ್ತಿಗಳನ್ನು ನನ್ನ ಪುಟ್ಟ ಶಕ್ತಿಯು ಸಹಿಸದೆ ಚೀರಾಡಿತು. ಈ ಚೀರಾಟದ ಹಿಂದಿರುವ ವ್ಯಕ್ತಿಮಾತ್ರದ ಅಶಕ್ತತೆಯನ್ನು ಸಮಾಜ ದುರುಪಯೋಗ ಮಾಡಿಕೊಂಡಿತು, ಮಾಡಿಕೊಳ್ಳುವದರಲ್ಲಿದೆ. ಅದರಿಂದ ನನ್ನಲ್ಲಿಯ ಪೌರುಷ ಶಕ್ತಿಯು ಹೊರನೋಟದ ಸಂಸಾರದಿಂದ ವಿಮುಖವಾಗಲಿದೆ. ಅಂತರ್ಮುಖತೆಯತ್ತ ಇಣಿಕಿನೋಡುತ್ತಿದೆ. ಪ್ರಕೃತಿಯಿಂದ ದೂರ ಸರಿಯಲು ಹವಣಿಸುತ್ತಿದೆ. ಆದರೂ ಹೃದಯದಾಳದಲ್ಲಿ ಮಹಾಮಾತೆಯ ರೂಪು ನೆಲೆಯೂರುತ್ತಿದೆ. ಅದನ್ನು ಅನುಭವಿಸಿ, ವ್ಯಕ್ತಪಡಿಸುವ ಒಂದು ಹೊಂಚನ್ನು ಮನಸ್ಸು ಹಾಕುತ್ತಿದೆ. ಅದು ಮುಂಬರುವ ನನ್ನ 'ನೆಲದಾಯಿ' ಎಂಬ ಕಾದಂಬರಿಯಲ್ಲಿ ರೂಪುಗೊಂಡೀತು.

**ಸಂದರ್ಶಕ:**— ಪ್ರತಿಸರಕಾರ, ಭಸ್ಮಾಸುರ — ಈ ಕಾದಂಬರಿಗಳು ಹೇಗೆ ಹುಟ್ಟಿದವು?

**ಅಣ್ಣಾರಾಯ:**— ಈ ಒಂದು ಭಾವಪ್ರವಾಹದಲ್ಲಿ ತೇಲಿ, ಕಾಣದ ಕಡಲ ಹಾದಿ ಹಿಡಿದಾಗ, ರಾಷ್ಟ್ರೀಯ ಜೀವನದ ಏರುಪೇರುಗಳಿಂದ ಎದ್ದ ಎರಡು ತೆರೆಗಳು ನನ್ನ ತಲೆಯ ಮೇಲೆ ಹಾಯ್ದುಹೋಗಿ, ಉಸಿರುಕಟ್ಟಿದಂತೆ ಆಗಲು, ಉಸುರಾಡಿಸಲೆಂದು 'ಪ್ರತಿಸರಕಾರ' ಮತ್ತು 'ಭಸ್ಮಾಸುರ'ಗಳನ್ನು ಆಗಾಗ ವಿಮರ್ಶಿಸಿದೆ. ಇಂಥದೇ ಒಂದು ಪ್ರಾಚೀನಕಾಲದ ಘಟನೆಯನ್ನು ಚಿತ್ರಿಸುವ ಯತ್ನದಲ್ಲಿ 'ಸಾಮ್ರಾಟ್ ಶ್ರೇಣಿಕ' ಕಾದಂಬರಿಯು ರೂಪುಗೊಂಡಿತು.

**ಸಂದರ್ಶಕ:**— ಕಾದಂಬರಿಗಳ ಜೊತೆಗೆ ತಾವು ಪ್ರವಾಸ ಪ್ರಬಂಧ, ಜೈನಧರ್ಮ ಹಾಗೂ ಶೈಕ್ಷಣಿಕ ವಿಷಯವಾಗಿಯೂ ಗ್ರಂಥಗಳನ್ನು ಬರೆದಿದ್ದೀರಿ. ಈ ಗ್ರಂಥಗಳು ಹೇಗೆ ರೂಪುಗೊಂಡವು ತಿಳಿಸುವಿರಾ?

**ಅಣ್ಣಾರಾಯ:**— ಓಹೋ! ಅದಕ್ಕೇನು? ನೋಡಿ. ಜೀವನದ ವಿಶಾಲ ನೋಟ, ಪರಿಚಯಗಳು ಕಲೆಗೆ ಅತ್ಯವಶ್ಯಕ ಎಂಬುದರ ಅರಿವು 'ರಾಷ್ಟ್ರಪುರುಷ'ನನ್ನು ಚಿತ್ರಿಸುವಾಗಲೇ ನನಗೆ ಬಂತು. ಅದಕ್ಕಾಗಿ ಭಾರತ

ಯಾತ್ರೆಗೆ ಹೊರಟೆ. ಆಗಿನ ಕೆಲವು ಅನುಭವಗಳನ್ನು 'ನಾನು ಕಂಡ ನಾಡು' ಎಂಬುದರಲ್ಲಿ ಹಿಡಿದಿಡಲು ಯತ್ನಿಸಿದ್ದೇನೆ. ನನಗೆ ಉಂಟಾಗುತ್ತಿರುವ ಒಂದು ಅರಿವು, ಅನಿಸಿಕೆಗಳಿಗೆ ನಮ್ಮ ಪರಂಪರೆಯಲ್ಲಿ ಏನಾದರೂ ತಾತ್ವಿಕ ತಳಹದಿ ಇದೆಯೆ?—ಎಂಬ ಪ್ರಶ್ನೆಗೆ ಉತ್ತರ ಹುಡುಕುವ ಯತ್ನವೇ ನನ್ನ 'ಜೈನ ಧರ್ಮ' ಗ್ರಂಥದ ಸಂಕಲನಕ್ಕೆ ಕಾರಣವಾಯಿತು. ಶಿಕ್ಷಕ ವೃತ್ತಿಯಲ್ಲಿ ಇದ್ದುದರಿಂದ ಶೈಕ್ಷಣಿಕ ಕ್ಷೇತ್ರದಲ್ಲಿ ಉಂಟಾದ ಹೊಸ ಮನ್ವಂತರವನ್ನು ಅರಿತುಕೊಳ್ಳುವ, ವೃತ್ತಿಗೆ ಅಳವಡಿಸಿಕೊಳ್ಳುವ ಯತ್ನದಲ್ಲಿ 'ಮೂಲ ಶಿಕ್ಷಣದ ಮೌಲ್ಯಮಾಪಣ' ನಿರ್ಮಾಣವಾಯಿತು.

**ಸಂದರ್ಶಕ:**—'ಭಾರತದ ಬೆಳಕು', 'ಭಾರತೀಯ ಸಂಸ್ಕೃತಿಯ ಹೃದಯ'ಗಳು ಆ ಮೇಲೆ ಪ್ರಕಟವಾದುವಲ್ಲವೆ?

**ಅಣ್ಣಾರಾಯ:**—ಅಹುದು. ಜೈನ ಹಾಗೂ ಇತರ ಧರ್ಮಗಳ ಗ್ರಂಥಗಳ ಅಭ್ಯಾಸ, ಪ್ರವಾಸದಿಂದಾಗಿರುವ ವ್ಯಕ್ತಿಗಳ ಪರಿಚಯ, ಸ್ಥಳ ಸನ್ನಿವೇಶಗಳ ನಿರೀಕ್ಷಣೆಯಿಂದ ಉಂಟಾದ ಕಲ್ಪನೆ, ಅರಿವುಗಳಿಂದಾಗಿ ಕೆಲವೊಂದು ವ್ಯಕ್ತಿಗಳ ಭಾವಚಿತ್ರಗಳು ನನ್ನ ಮನದಲ್ಲಿ ಮೂಡಿನಿಂತವು. ಅವುಗಳನ್ನು ಚಿತ್ರಿಸಲು 'ಭಾರತದ ಬೆಳಕು' ಎಂಬುದರಲ್ಲಿ ಪ್ರಯತ್ನಿಸಿದೆನು. ಹಾಗೆಯೇ 'ಭಾರತೀಯ ಸಂಸ್ಕೃತಿಯ ಹೃದಯ'ವನ್ನು ಗುರುತಿಸಲಿಕ್ಕೆ ಹೆಣಗಾಡಿದೆ. ನಿವೃತ್ತಿಯ ಮೇಲೆ ಕಣ್ಣಿಟ್ಟ ಪ್ರವೃತ್ತಿಯೇ ಈ ಸಂಸ್ಕೃತಿಯ ಜೀವಾಳವೆಂದು ಕಂಡುಕೊಂಡೆ. ಅದಕ್ಕೆ ಅನುಗುಣವಾಗಿ ಮುಂದಿನ ಬಾಳಿನಲ್ಲಿ ಬದುಕಲು ಹವಣಿಸುತ್ತಿರುವೆ.

**ಸಂದರ್ಶಕ:**—ತಾವು ಕವನಗಳನ್ನು ಬರೆದಂತೆ ತೋರುವದಿಲ್ಲ. ಆದರೆ ಕಾವ್ಯಗಳಲ್ಲಿ ಆಸಕ್ತಿಯನ್ನಾದರೂ ಬೆಳೆಯಿಸಿಕೊಂಡು ಬಂದಿರಬೇಕಲ್ಲವೆ?

**ಅಣ್ಣಾರಾಯ:**—ನಾನು ಸಾಹಿತ್ಯಕ್ಷೇತ್ರದಲ್ಲಿ ಕಾಲಿಡುವಾಗಲೇ ಕೆಲವು ಕವನಗಳನ್ನು ರಚಿಸಿದೆ. ಅವು ಅಲ್ಲಲ್ಲಿ ಪತ್ರಿಕೆಯಲ್ಲಿ ಬೆಳಕನ್ನು ಕಂಡಿವೆ. 'ನಿಸರ್ಗ' ಕಾದಂಬರಿಯನ್ನು ಬರೆಯುವ ಪೂರ್ವದಿಂದಲೂ ಹಳಗನ್ನಡ ಹಾಗೂ ಹೊಸಗನ್ನಡ ಕಾವ್ಯಗಳನ್ನು ಓದುತ್ತಿದ್ದೆ. ತಿಳಿದುಕೊಳ್ಳಲೂ ಯತ್ನಿಸುತ್ತಿದ್ದೆ. ಅದರಿಂದ ನನ್ನ ಅಂತರ್ಮುಖತೆಗೆ ಅವಕಾಶ ಉಂಟಾಯಿತು. ಆಧುನಿಕ ಭಾವಗೀತಗಳಲ್ಲಿಯ ಕವಿಗಳ ಆಂತರಿಕ ಅರಿವನ್ನು

ನನ್ನದಾಗಿಯೂ ಮಾಡಿಕೊಳ್ಳಬೇಕೆಂಬ ಮೋಹದಲ್ಲಿ 'ದತ್ತವಾಣಿ'ಯನ್ನು ರೂಪಿಸಿಕೊಳ್ಳಲು ಯತ್ನಿಸಿದೆ. 'ರಾಷ್ಟ್ರಪುರುಷ' ಕಾದಂಬರಿಯ ನಿರೂಪಣೆಗಾಗಿ ಸಾಹಿತ್ಯಿಕ ತಂತ್ರಗಳ ಅಭ್ಯಾಸಕ್ಕೆ ತೊಡಗಿ, 'ಲೇಖನಕಲೆ' ಎಂಬುದನ್ನು ಬರೆದೆ. ಹೀಗೆ ನನ್ನ ಸಾಹಿತ್ಯವು ನನ್ನ ಆಂತರಿಕ ವಿಕಾಸ, ಬಾಹ್ಯ ಜೀವನದ ಮೇಲೆ ಅದರಿಂದಾಗುವ ಪರಿಣಾಮ ಇವುಗಳಿಗೆ ಒಂದು ಕನ್ನಡಿಯಂತೆ ಆಗಿ, ಬೆಳೆದುಬಂದಿದೆ.

**ಸಂದರ್ಶಕ:**— ತಮ್ಮ ಕಾದಂಬರಿಗಳಲ್ಲಿ ಯಾವುದಾದರೂ ವಿಚಾರ ಪ್ರಣಾಲಿ ಅಡಗಿದೆಯೇನು?

**ಅಣ್ಣಾರಾಯ:**— ಯಾವ ಒಂದು ವಿಚಾರ ಪ್ರಣಾಲಿಯ ಪ್ರಚಾರಕ್ಕಾಗಿ ಯಾವ ಕಾದಂಬರಿಯನ್ನೂ ನಾನು ರಚಿಸಲಿಕ್ಕೆ ಯತ್ನಿಸಲಿಲ್ಲ. ನಾನು ಕಂಡು, ಅನುಭವಿಸಿದ ಜೀವನದ ವಿವಿಧ ಮುಖಗಳನ್ನು ಚಿತ್ರಿಸಲಿಕ್ಕೆ ಯತ್ನಿಸಿದ್ದೇನೆ. ಆ ಜೀವನಾಂಶಗಳಿಂದ ರೂಪುಗೊಂಡ ಪಾತ್ರಗಳಿಗೆ ಬರುವ ಸ್ವಾಭಾವಿಕ ವಿಚಾರಗಳೇ ನನ್ನ ಕಾದಂಬರಿಗಳಲ್ಲಿಯ ವಿಚಾರಗಳು. ಆಯಾ ಪಾತ್ರಗಳ ಸಂಗಡಿಗನಾಗಿ ಮಾತ್ರ ನಾನು ಇರಲಿಕ್ಕೆ ಪ್ರಯತ್ನಿಸಿದ್ದೇನೆ. ಅದರಿಂದ ಮೇಲುನೋಟಕ್ಕೆ ವಿವಿಧ ವಿಚಾರಗಳ ತಾಕಲಾಟ, ಆಭಾಸ, ವಿರೋಧಗಳು ಕಾಣಬಹುದು. ಆದರೂ ಎಲ್ಲಕ್ಕೂ ತಳಹದಿಯಾಗಿ ಸತ್–ಅಸತ್‌ಗಳ ಹೋರಾಟ, ಅಸತ್‌ನ್ನು ಗೆಲ್ಲಲು ಸತ್ ಪ್ರಯತ್ನಿಸುತ್ತಿರುವುದರ ಪ್ರಜ್ಞೆಯೊಂದು ಇದೆ.

**ಸಂದರ್ಶಕ:**— ಕಾದಂಬರಿ ಎಂಬ ಈ ಸಾಹಿತ್ಯ ಪ್ರಕಾರದ ಬಗೆಗೆ ತಮ್ಮ ಅಭಿಪ್ರಾಯಗಳೇನು?

**ಅಣ್ಣಾರಾಯ:**— ಕಾದಂಬರಿಯ ರಚನೆಗೆ ಕೈಹಾಕುವ ಮೊದಲು ಈ ಪ್ರಜ್ಞೆಯು ಕಾದಂಬರಿಕಾರನಿಗೆ ಅತ್ಯವಶ್ಯವೆಂದು ನಾನು ನಂಬುತ್ತೇನೆ. ಈ ಪ್ರಜ್ಞೆಯು ಕಾದಂಬರಿಯ ರೂಪದಲ್ಲಿ ವ್ಯಕ್ತವಾಗುವಾಗ ಅದಕ್ಕೊಂದು ಆಕಾರ ಬೇಕಾಗುತ್ತದೆ. ಇಂಥ ಆಕಾರದಲ್ಲಿ ಕಾದಂಬರಿಯ ಕಥೆಯೊಂದು ಮೈಕಟ್ಟು ಇದ್ದಂತೆ. ಅದಕ್ಕೆ ಯೋಗ್ಯ ಆರಂಭ, ಮುಕ್ತಾಯಗಳು ಇರಬೇಕು. ಕುತೂಹಲ ಕಾಯ್ದುಕೊಳ್ಳುವ ಸನ್ನಿವೇಶಗಳಿಂದ ಅದು ಕೂಡಿರಬೇಕು. ಈ ಸನ್ನಿವೇಶಗಳು ವಿವಿಧ ಸ್ವಭಾವದ ಪಾತ್ರಗಳಿಂದ ಉಂಟಾಗಬೇಕು. ಪಾತ್ರಗಳನ್ನು ಸನ್ನಿವೇಶಗಳೂ ರೂಪಿಸುವಂತಿರಬೇಕು. ಇವುಗಳಿಗೆಲ್ಲ ಜೀವನದ ವಾಸ್ತವತೆಯು ತಳಹದಿಯಾಗಿರಬೇಕು. ಅವಾಸ್ತವ ಪಾತ್ರಚಿತ್ರಣ,

ಸನ್ನಿವೇಶ ರಚನೆಗಳು ಕೃತಿಗೆ ಸಾರ್ವತ್ರಿಕತೆಯನ್ನುಂಟುಮಾಡಲಾರವು. ಕಲಾವಿದನ ವೈಯಕ್ತಿಕ ಅನುಭವಗಳೂ ಕೂಡ ಸಾರ್ವಜನಿಕ ಅನುಭವದ ಸ್ವರೂಪವನ್ನು ತಳೆದು, ಕೃತಿಯಲ್ಲಿ ರೂಪುಗೊಳ್ಳಬೇಕಾಗುತ್ತದೆ. ಸಾಮಾಜಿಕ ಪರಿಸ್ಥಿತಿಯು ವ್ಯಕ್ತಿಯ ಸಮಸ್ಯೆಯು ಹೇಗಾಗುತ್ತದೆ? ವ್ಯಕ್ತಿಯು ತನ್ನ ಸಮಸ್ಯೆಗಳ ಪರಿಹಾರಕ್ಕೆ ಹೇಗೆ ಯತ್ನಿಸುತ್ತಾನೆ? ಅಂಥ ಯತ್ನವು ಸಾಮಾಜಿಕ ಪರಿಸ್ಥಿತಿಯ ಪರಿವರ್ತನಕ್ಕೆ ಹೇಗೆ ಕಾರಣವಾಗುತ್ತದೆ? ಪರಿಹಾರ ಸೂಚಕವಾಗುತ್ತದೆ?—ಇಂಥ ಸಮಸ್ಯೆಯ ಉತ್ಪತ್ತಿ, ಅದನ್ನು ಬಿಡಿಸುವ ಪಾತ್ರಗಳ ಪ್ರಯತ್ನ, ಸಮಸ್ಯೆಯ ಪರಿಹಾರದ ಸಂಕೇತಗಳಲ್ಲಿ ಕಾದಂಬರಿಯ ಆದಿ-ಮಧ್ಯ-ಅಂತ್ಯಗಳು ಇರುತ್ತವೆ. ಇವೆಲ್ಲವುಗಳಿಂದ ಕಾದಂಬರಿಗೆ ಒಂದು 'ಆಕಾರ' ಉಂಟಾಗುತ್ತದೆ. ಅಂಗಾಂಗಗಳೆಲ್ಲದರ ಸೌಂದರ್ಯದಿಂದಲೇ ಒಟ್ಟು ಸೌಂದರ್ಯ ನಿರ್ಮಾಣವಾಗುವದಿರುತ್ತದೆ.

**ಸಂದರ್ಶಕ:**—ತಾವು ಕಾದಂಬರಿಗಳ ರಚನೆಗೆ ಜೀವನವನ್ನು ಸಮಗ್ರವಾಗಿ ನೋಡುವ ನೋಟ ಅಗತ್ಯವೆಂದು ಈ ಮೊದಲು ಹೇಳಿದಿರಿ. ಈಚೆಗೆ ಕನ್ನಡದಲ್ಲಿ ಸಣ್ಣ ಕತೆಗಳನ್ನು ಬರೆಯುವವರ ಸಂಖ್ಯೆ ಕಡಿಮೆಯಾಗುತ್ತಿದ್ದಂತಿದೆ. ಕಾದಂಬರಿಗಳ ಸಂಖ್ಯೆ ಹೆಚ್ಚಾಗುತ್ತಿದೆ. ಇದರಿಂದ ತಾವು ಹೇಳಿದ ಆ ಸಮಗ್ರದೃಷ್ಟಿ ನಮ್ಮಲ್ಲಿ ಹೆಚ್ಚಾಗಿ ಬೆಳೆದಿದೆ ಎಂದು ಹೇಳಬಹುದೇನು?

**ಅಣ್ಣಾರಾಯ:**—ನಿಜವಾಗಿ, ಸಮಗ್ರದೃಷ್ಟಿಯು ಬೆಳೆದಿದೆ ಎಂದು ಹೇಳುವ ಬದಲು, ನಮ್ಮ ಮನಸ್ಸೇನೇ ಅಲ್ಲಿಷ್ಟು ಇಲ್ಲಿಷ್ಟು ವಿಶಾಲ ಪ್ರಪಂಚದೊಳಗಿನ ಸಂಗತಿಗಳನ್ನು ಕಲೆ ಹಾಕುವ ವೃತ್ತಿಗೆ ಬಂದಿದೆ ಎಂದು ಹೇಳಬಹುದು. ಆ ಸಂಗತಿಗಳನ್ನು ಸಮಗ್ರದೃಷ್ಟಿಯಿಂದ ಅವಲೋಕಿಸಿ, ಅನುಭವಿಸಿ, ಹೃದಯದ ಕುಲುಮೆಯಲ್ಲಿಟ್ಟು ಕರಗಿಸಿ, ಕಲ್ಪನೆಯ ಪಡಿಯಚ್ಚಿನಲ್ಲಿ, ಸ್ಫೂರ್ತಿಯ ಇಕ್ಕಳಿಕೆಯಲ್ಲಿ ಹಿಡಿದು, ಅನುಭವಾಮೃತವನ್ನು ಸುರಿಯುವ ಹದಗಾರಿಕೆ ನಮ್ಮಲ್ಲಿ ಎಷ್ಟಿದೆ ಎಂದು ಹೇಳುವುದು ಕಷ್ಟ. ಈ ಹದ ಬರುವ ತನಕ ಕಾದಂಬರಿಯ ಪ್ರಪಂಚ ಉಜ್ವಲವಾಗುವದಿಲ್ಲ.

**ಸಂದರ್ಶಕ:**—ಅಂದರೆ ನಾವು ಈಗ ಒಳ್ಳೆಯ ಕತೆಗಳನ್ನು ಬರೆಯುತ್ತಿಲ್ಲ. ಒಳ್ಳೆಯ ಕಾದಂಬರಿಗಳನ್ನೂ ಹೆಚ್ಚಾಗಿ ರಚಿಸುತ್ತಿಲ್ಲ ಎಂದು ಅರ್ಥವೇನು?

**ಅಣ್ಣಾರಾಯ:**—ಒಟ್ಟಿನಲ್ಲಿ ಈ ಮಾತು ನಿಜವೆಂದು ಎನಿಸುತ್ತಿದೆ. ಯಾಕೆಂದರೆ ಸಣ್ಣ ಕತೆಗಾರಿಕೆಯ ಮನೋವೃತ್ತಿ ನಮ್ಮಲ್ಲಿ ಉಳಿದಿಲ್ಲ. ಕಾದಂಬರಿಯ ರಚನೆಗೆ ಬೇಕಾಗುವ ಪೂರ್ಣತೆಯನ್ನು ನಾವು ಮುಟ್ಟಿಲ್ಲ.

**ಸಂದರ್ಶಕ:**—ಆದರೆ ಈ ಅನಿಶ್ಚಿತ ಪರಿಸ್ಥಿತಿ ಬೇಗ ಬದಲಾಯಿಸುತ್ತದೆ—ಎಂದು ನಾವು ಆಶಿಸಬಹುದಲ್ಲವೆ?

**ಅಣ್ಣಾರಾಯ:**—ಪ್ರಯತ್ನಪಟ್ಟರೆ ಈ ಸ್ಥಿತಿಯನ್ನು ಬದಲಿಸಬಹುದು. ಅನಿಶ್ಚಿತತೆ ಇದೆ ಎಂದು ನಾವು ಹೆದರುವ ಕಾರಣವಿಲ್ಲ. ಈಗ ಕಾದಂಬರಿಯ ರಚನೆಯೇನೋ ವಿಪುಲವಾಗಿ ನಡೆಯುತ್ತಿದೆ. ಇದರ ಬಗ್ಗೆ ಅಭಿರುಚಿಯೂ ಜನರಲ್ಲಿ ಬೆಳೆದದ್ದು ಕಂಡುಬರುತ್ತದೆ. ಇದು ನಿಜವಾಗಿಯೂ ಆಶಾದಾಯಕವಾದ ಸಂಗತಿ. ಅದರಲ್ಲಿಯೇ ನಾಲ್ಕಾರು ಜನ ಕಾದಂಬರಿಕಾರರು ಒಳ್ಳೆಯ ಮನೋವೃತ್ತಿ, ಕಲೆಗಾರಿಕೆಗಳನ್ನು ಬೆಳೆಯಿಸಿಕೊಂಡು, ಕೃತಿ ರಚಿಸುತ್ತಿರುವುದೂ ಸಂತೋಷದ ಸಂಗತಿಯಾಗಿದೆ.

**ಸಂದರ್ಶಕ:**—ಅಣ್ಣಾರಾಯರೇ, ಕೊನೆಯದಾಗಿ ಒಂದು ಪ್ರಶ್ನೆಯನ್ನು ಕೇಳುತ್ತೇನೆ. ಸಾಹಿತ್ಯ, ಕಲೆಗಳ ಮೂಲಕ ಭಾರತೀಯತ್ವದ ಬಗ್ಗೆ ಜನತೆಯಲ್ಲಿ ಬೆಳೆಯಬಹುದಾದ ಭಾವನೆಗಳ ಬಗೆಗೆ ತಮ್ಮ ಅಭಿಪ್ರಾಯವೇನು?

**ಅಣ್ಣಾರಾಯ:**—ನಮ್ಮಲ್ಲಿ ವೈಯಕ್ತಿಕ ಹಿತವು ಸಾರ್ವಜನಿಕ ಹಿತದೊಡನೆ ಸಾಧ್ಯವಾಗುತ್ತದೆಂಬ ಕಲ್ಪನೆ ಉಂಟಾಗಬೇಕು. ಸಾರ್ವತ್ರಿಕವಾಗಿ ಬರುವ ಹಿತಕ್ಕಾಗಿ ಆಗುವ ವಿಲಂಬ, ಸ್ವಾರ್ಥದಲ್ಲಿಯ ತುಸು ತ್ಯಾಗ, ಇವುಗಳಿಗಾಗಿ ಸಂಯಮದ ಅವಶ್ಯಕತೆ ಇದೆ. ಇಂಥ ಸಂಯಮ ಜೀವನದ ಕಲ್ಪನೆಯನ್ನು ಜನರಿಗೆ ತಂದುಕೊಡುವದರಲ್ಲಿಯೇ ಭಾರತೀಯತೆಯ ಭಾವನೆಯು ಬೆಳೆದುಬರುತ್ತದೆ. ಇಂಥ ಸಂಯಮಯುತ ಜೀವನವನ್ನು ರೂಪಿಸಿಕೊಳ್ಳಲಿಕ್ಕೆ ನನ್ನ ವಾಚನಾಭಿರುಚಿ, ಒಳ್ಳೆಯದನ್ನು ಪ್ರೀತಿಸುವುದು, ಫಲಾಪೇಕ್ಷೆಯಿಲ್ಲದೆ ಕರ್ತವ್ಯನಿರತನಾಗಿರುವುದು, ಇವೇ ಮೊದಲಾದ ಗುಣಗಳು ನೆರವಾಗಿವೆ. ಇದರಿಂದ ಬಾಹ್ಯಜೀವನದಲ್ಲಿ ಒದಗುವ ಆಘಾತ, ಕೊರತೆ, ಅವಮಾನ, ಮನಸ್ಸಿನ ವಿರುದ್ಧ ನಡೆಯುವ ಘಟನೆ, ಸೋಲು, ದುಃಖಗಳೆಲ್ಲ ಒಂದು ಪ್ರಯೋಗವೆಂದು ನಿರೀಕ್ಷಿಸುವ ಶಕ್ತಿಯುಂಟಾಗುತ್ತದೆ. ಈ ಪ್ರಯೋಗಗಳಿಂದ ಪ್ರಯೋಜನಕಾರಿಯಾದ ಇನ್ನಾವುದೋ ಒಂದು ಪ್ರೇರಣೆಯ ಸಂಕೇತ ಉಂಟಾಗುತ್ತದೆ. ಆ ಸಂಕೇತದ ಗುಂಟ ಸಾಧನೆ ಮಾಡು

ವದರಲ್ಲಿ ಒಂದು ಅನುಪಮ ಆನಂದ ಲಭಿಸುತ್ತದೆ. ಅಂಥ ಆನಂದಾಂಶವನ್ನು ಜನಕ್ಕೂ ಪರಿಚಯ ಮಾಡಿಕೊಡಬೇಕೆಂಬ ಲವಲವಿಕೆಯೇ ಸಾಹಿತ್ಯಕಲೆಗಳ ನಿರ್ಮಾಣಕ್ಕೆ ಕಾರಣವಾಗುತ್ತದೆ. ಅದರಿಂದ ಜೀವನವೊಂದು ಪ್ರಯೋಗ ವೆಂದು ಭಾವಿಸಿ, ಆಸ್ಥೆಯಿಂದ ಬಾಳಲಿಕ್ಕೆ ಯತ್ನಿಸಬೇಕು. ಪ್ರಯೋಗದ ಫಲಾಫಲಗಳು ನನ್ನವೇ ಅಲ್ಲ; ನನ್ನ ಮುಖಾಂತರ ಲೋಕಕ್ಕೆ ಸಲ್ಲತಕ್ಕವೆಂಬ ಭಾವನೆಯು ಇರಬೇಕು. ಇದರಿಂದ ಜೀವನವು ಸುಖಶಾಂತಿಗಳಿಂದ ಕೂಡಿ ರುವದಲ್ಲದೆ ಸಾರ್ಥಕವೂ ಆಗುವದು. ಯಾವ ಕೊರತೆಗಳೂ ನಮ್ಮನ್ನು ಬಾಧಿಸವು.

**ಸಂದರ್ಶಕ:**—ಈ ಮಾತಿನ ಬಗೆಗೆ ಯಾವ ಭಿನ್ನಾಭಿಪ್ರಾಯವೂ ಸಾಧ್ಯವಿಲ್ಲ, ಎಂದು ಕಾಣುತ್ತದೆ. ಅಣ್ಣಾರಾಯರೇ, ತಮ್ಮ ಸಾಹಿತ್ಯವಿಚಾರ ಗಳ ಬಗೆಗೆ ಇಷ್ಟು ಸಂಗತಿಗಳನ್ನು ತಿಳಿಸಿ ಕೊಟ್ಟಿದ್ದಕ್ಕಾಗಿ ತಮಗೆ ವಂದನೆ ಗಳನ್ನು ಸಲ್ಲಿಸುತ್ತೇನೆ.

ನಮಸ್ಕಾರ.

# ಆಧುನಿಕ ರತ್ನತ್ರಯರು

ಶ್ರೀ. ಜಿ. ಬ್ರಹ್ಮಪ್ಪ, ಎಂ.ಎ., ಶಿವಮೊಗ್ಗ.

ರತ್ನತ್ರಯ ಎಂಬ ಮಾತು ಜೈನ ಧರ್ಮದ ಉಸಿರು ಎಂದರೂ ಅತಿಶಯೋಕ್ತಿಯಾಗದು. ರತ್ನತ್ರಯವೆ ಮೋಕ್ಷಕ್ಕಡರಲು ಸೋಪಾನತ್ರಯವಿದ್ದಂತೆ! ಇಂಥ ಪವಿತ್ರಪದಪುಂಜವನ್ನು ಆಗಾಗ ವ್ಯಕ್ತಿತ್ರಯಗಳಿಗೂ ಅನ್ವಯಿಸಿ ವಿವರಿಸಿರುವ ಸಂದರ್ಭಗಳುಂಟು. ಜೈನ ಸಂಸ್ಕೃತಿಯ ಪ್ರಚಾರಕ್ಕೆ ನೆರವಾದ ಪವಿತ್ರಾತ್ಮರನ್ನು ವರ್ಣಿಸಲು **ಪವಿತ್ರಪದ** ಪುಂಜದ ರೂಪಕವೇ ಬೇಕಾಗುವುದು.

ಕ್ರಿ. ಶ. ೯ ಮತ್ತು ೧೦ನೆಯ ಶತಮಾನ, ಜೈನ ಸಂಸ್ಕೃತಿಯ ಸುವರ್ಣಯುಗ. ಜೈನಾಗಮ, ಅಂದು ಶಾಸ್ತ್ರೋಕ್ತವಾದ ವಿವರಣೆಯನ್ನು ಪಡೆದು, ವಿಜ್ಞಾನಾತ್ಮಕವಾಗಿ ಪ್ರಕಟವಾದ ಪಾವನಯುಗ. ಆಗ ವೀರಸೇನ, ಜಿನಸೇನರು ಧವಳಗ್ರಂಥಗಳ ಜನ್ಮದಾತರಾದರು. ಜೈನ ಧರ್ಮಕ್ಕೆ ದಾರ್ಶನಿಕವಾದ ಪ್ರತಿಭಾಪೂರ್ಣವಾದ ವಿವರಣೆಯಿತ್ತರು. ಜಿನಸೇನ, ಗುಣಭದ್ರರು ಕಲೆತು, 'ಮಹಾಪುರಾಣ'ವನ್ನು ಪೂರ್ಣಗೊಳಿಸಿದರು. ಒಂದೆಡೆ ಧಾರ್ಮಿಕ ಜ್ಞಾನರಾಶಿಯ ಪ್ರಕಟಣೆ, ಮತ್ತೊಂದೆಡೆ ಕಾವ್ಯಕಲಾನಿಧಿಯ ಜನ್ಮಧಾರಣೆ. ಪಾಂಡಿತ್ಯ, ಪ್ರತಿಭೆ ಇಕ್ಕೆಲದಲ್ಲಿ ನಿಂತು, ನಟ್ಟನಡುವೆ ತಪಸ್ಸು (ಆತ್ಮಜ್ಞಾನ) ರಾರಾಜಿಸಿ, ಆಚಾರ್ಯತ್ರಯರೇ ಅಂದಿನ ಯತಿ ರತ್ನತ್ರಯರಾಗಿ, ಜಿನಧರ್ಮ ಜಾಜ್ವಲ್ಯಮಾನವಾಗಿ ಪ್ರಕಾಶಿಸಲು ಕಾರಣಭೂತರಾದರು. ಇದರ ಜೊತೆಯಾಗಿ ತಪಶ್ಶಕ್ತಿ, ವಿದ್ವತ್‌ಶಕ್ತಿ, ಪ್ರತಿಭಾಶಕ್ತಿ—ಈ ಶಕ್ತಿ ರತ್ನತ್ರಯಗಳು ಬೇರೆ!

ಕ್ರಿ. ಶ. ೧೦ ಮತ್ತು ೧೧ನೆಯ ಶತಮಾನಗಳು ಕನ್ನಡ ನಾಡು ಹಿಂದೆಂದೂ ಕಾಣದಂತಹ ಪ್ರತಿಭಾನ್ವಿತ ಪ್ರಕಾಶಪೂರ್ಣಯುಗವನ್ನು ಪಡೆದು, ಎಂದೆಂದಿಗೂ ಮರೆಯದಂಥ ಕಾವ್ಯವಾಹಿನಿ, ಕನ್ನಡವಾಹಿನಿಯಾಗಿ ದಿವ್ಯಧ್ವನಿ ಕನ್ನಡದ ಇನಿದನಿಯಾಗಿ, ಪ್ರವಹಿಸಿದ ಮಹಿಮಾನ್ವಿತ ಯುಗವದು! ಪಂಪ-ಪೊನ್ನ-ರನ್ನ—ಈ ಮೂವರು ಸಮಕಾಲೀನರು. ಪಂಪ-ಪೊನ್ನರು ವಯಸ್ಸಿನಲ್ಲಿ ಹಿರಿಯರು. ರನ್ನನಿಗೆ ತಾರುಣ್ಯೋದಯವಾಗುತ್ತಿದ್ದಾಗ್ಗೆ ಪಂಪ-ಪೊನ್ನರಿಗೆ ಇಳಿವಯಸ್ಸಾಗುತ್ತಿದ್ದಿರಬಹುದು. ಈ ಮೂವರನ್ನು ಕವಿರತ್ನತ್ರಯ

ರೆಂದು ಸಹಸ್ರಾರು ವರ್ಷದಿಂದ ಕನ್ನಡ ಜನ ಕೊಂಡಾಡಿದ್ದಾರೆ. ಮೇಲಿನ ಆಚಾರ್ಯತ್ರಯರು ಅಚ್ಚ ಕನ್ನಡಿಗರಾದರೂ ಅವರು ಬರೆದದ್ದು ಸಂಸ್ಕೃತ, ಪ್ರಾಕೃತಗಳಲ್ಲಿ. ಅದರಿಂದ ಅಚ್ಚ ಕನ್ನಡದ ಮೊದಲನೆಯ ರತ್ನತ್ರಯರೆಂದರೆ ಈ ಕವಿತ್ರಯರೆ. ಕನ್ನಡ ಭಾಷಾಮೃತವನ್ನು ಕರೆದು, ಕಾಸಿ ಕೆನೆಗಟ್ಟಿಸಿ ದವನು ಪಂಪ. ಅದನ್ನೇ ಮಥಿಸಿ ಬೆಣ್ಣೆ ತೆಗೆದವನು ರನ್ನ! ಕನ್ನಡದೇವಿಗೆ ಮಂಗಳಸೂತ್ರ ಪಂಪ. ಕನ್ನಡ ತಾಯಿಯ ಸೌಭಾಗ್ಯದ ಕುರುಹಾಗಿ ಆಕೆಯ ಕಿವಿಯಲ್ಲಿ ರಾರಾಜಿಸುವ ಓಲೆಭಾಗ್ಯವೇ ಪೊನ್ನ-ರನ್ನರು.

ಈಗ ಆಧುನಿಕ ರತ್ನತ್ರಯರತ್ತ ತಿರುಗೋಣ. ಮೈಸೂರಿನಲ್ಲಿ ರಾಜಾ ಶ್ರಯದಲ್ಲಿ ಬೆಳಕಿಗೆ ಬಂದ ಶಾಂತಿರಾಜ ಶಾಸ್ತ್ರಿಗಳು ಈ ರತ್ನತ್ರಯರಲ್ಲಿ ಮೊದಲಿಗರು. ಮಹಾಪುರಾಣವೆಂಬ ಮಹಾಮೇರುವಿನ ದರ್ಶನಕ್ಕೆ ಹಂಬಲಿ ಸಿದ ಕನ್ನಡಿಗರಿಗಾಗಿ, ಅಚ್ಚ ಕನ್ನಡದ ವ್ಯಾಖ್ಯಾನದ ಸೋಪಾನಮಾಲೆಯನ್ನು ವಿರಚಿಸಿದ ಕರುಣಾಮಯರೆ, ಈ ಶಾಸ್ತ್ರಿಗಳು. ಇವರು ಉಭಯಭಾಷಾ ಪಂಡಿತರು. ಹರಿವಂಶ, ನಾಗಕುಮಾರ ಚರಿತೆ, ರತ್ನಾಕರ ಶತಕ ಮುಂತಾದ ಕನ್ನಡ ಗ್ರಂಥಗಳನ್ನು ಸಂಪಾದಿಸಿ, ಹೊಸಗನ್ನಡದ ವ್ಯಾಖ್ಯಾನವನ್ನೂ ಅಲ್ಲಲ್ಲೆ ಕೊಟ್ಟು, ಮಹದುಪಕಾರ ಮಾಡಿರುವರು. ಈ ಶಾಸ್ತ್ರಿಗಳು ಹೊಸ ಕೃತಿಗಳ ನಿರ್ಮಾಣದತ್ತ ಗಮನ ಹರಿಸದೆ, ಹಳೆಯ ಕೃತಿಗಳ ಜೀರ್ಣೋದ್ಧಾರ, ಪ್ರಚಾರದತ್ತ ಪೂರ್ಣ ಗಮನಕೊಟ್ಟು, ಶ್ರಮಿಸಿದರು. 'ಜಿನಭಜನ ಸಾರ' ವೆಂಬ ಇವರ ಗ್ರಂಥವನ್ನು ಓದದ ಶ್ರಾವಕಿಯಿಲ್ಲ ಎಂದರೆ ತಪ್ಪಾಗದು. ಇವರ ಕೈ ಸೋಂಕಿನಿಂದ ಜಾರಿಕೊಂಡ ಜೈನ ಗ್ರಂಥವಾವುದೂ ಇಲ್ಲವೆಂದರೆ ಅತಿ ಶಯೋಕ್ತಿಯಾಗದು. ಈ ಶಾಸ್ತ್ರಿಗಳಿಗೆ ಮೈಸೂರಿನರಸರು 'ಪಂಡಿತರತ್ನ' ಎಂದು ಬಿರುದಿತ್ತು ಮನ್ನಣೆ ತೋರಿದರು.

ವಯಸ್ಸಿನಲ್ಲಿ ಇವರ ವಾರಿಗೆಯವರಾದ ವಿ. ಲೋಕನಾಥ ಶಾಸ್ತ್ರಿಗಳು ಜೈನಧರ್ಮ ಪ್ರಕಾಶನದಲ್ಲಿ ಅಸಾಧಾರಣವಾಗಿ ಶ್ರಮಿಸಿರುವರು. ಇವರು ಮೂಡಬಿದುರೆಯಲ್ಲಿದ್ದುಕೊಂಡು, ಅಲ್ಲಿ ಒಂದು ಜೈನ ಸಿದ್ಧಾಂತ ಭವನವನ್ನು ಸ್ಥಾಪಿಸಿ, ಅಪೂರ್ವಗ್ರಂಥರತ್ನಗಳನ್ನು ಕೂಡಹಾಕಿದರು. ಸ್ತೋತ್ರ, ಮಂತ್ರಸಾರ, ಬಾಲಬೋಧೆ, ಜೈನಧರ್ಮ, ಉಮಾಸ್ವಾಮಿ ಶ್ರಾವಕಾಚಾರ ಮುಂತಾದ ಗ್ರಂಥಗಳನ್ನು ಬೆಳಕಿಗೆ ತಂದರು. ಇವರು ಮಾಡಿರುವ ಧಾರ್ಮಿಕ ಸೇವೆ ಶಾಂತಿರಾಜ ಶಾಸ್ತ್ರಿಗಳಷ್ಟು ಹಿರಿದಾದುದು.

ಮೇಲ್ಕಂಡ ಶಾಸ್ತ್ರಿಗಳಿಬ್ಬರೂ ಸಂಸ್ಕೃತದಲ್ಲಿ ಅಸಾಧಾರಣ ಪಾಂಡಿತ್ಯ ವಿದ್ದವರು. ಅವರ ಕನ್ನಡವೂ ಕೂಡ ಸಂಸ್ಕೃತದಿಂದ ಕೊಬ್ಬಿ, ಉಬ್ಬಿದ ಕನ್ನಡ. ೨೦ನೆಯ ಶತಮಾನದ ಪೂರ್ವಾರ್ಧವೆಲ್ಲ ಈ ಮಹನೀಯರ ಸಾಹಿತ್ಯಸೇವೆಯ ಸೌರಭದಿಂದ ತುಂಬಿತುಳುಕಿರುವುದನ್ನು ಗಮನಿಸಬಹುದು. ಇಂದು ಈ ಇಬ್ಬರನ್ನೂ ಜೈನ ಸಮಾಜ ಕಳೆದುಕೊಂಡಿದೆ. ಇಬ್ಬರ ಜನ್ಮ ಭೂಮಿ ದಕ್ಷಿಣ ಕನ್ನಡ ಜಿಲ್ಲೆಯೇ. ಆದರೆ ಶಾಂತಿರಾಜ ಶಾಸ್ತ್ರಿಗಳು ಬೆಳಕಿಗೆ ಬಂದುದು ಮೈಸೂರಲ್ಲಿ.

ಆಧುನಿಕ ರತ್ನತ್ರಯರಲ್ಲಿ ಕೊನೆಯವರು ಮಿರ್ಜಿ ಅಣ್ಣಾರಾಯರು! ಪಂಪ-ಪೊನ್ನ-ರನ್ನ ಇವರಿಗೆ ವಯಸ್ಸಿನಲ್ಲಿ, ಸಾಹಿತ್ಯಕ್ಷೇತ್ರದಲ್ಲೂ ಇದ್ದ ಸಂಬಂಧ ಎಂಥದೋ ಅಂಥದೇ ಶಾಂತಿರಾಜ ಶಾಸ್ತ್ರಿಗಳು, ಲೋಕನಾಥ ಶಾಸ್ತ್ರಿಗಳು, ಮಿರ್ಜಿ ಅಣ್ಣಾರಾಯರ ನಡುವಣ ಸಂಬಂಧ.

ಮಿರ್ಜಿಯವರು ಓದಿದ್ದು ಕನ್ನಡ! ಬರೆದುದು ಕನ್ನಡ! ಸಂಸ್ಕೃತ ಪ್ರಾಕೃತಗಳೂ, ಇವರಲ್ಲಿ ಜೀರ್ಣವಾಗಿ ಕನ್ನಡದ ಕಮನೀಯ ಅಮೃತವಾಗಿ ಹರಿಯಿತು. ಮಿರ್ಜಿಯವರು ಪ್ರಖ್ಯಾತಿಗೆ ಬಂದುದು, ಕಾದಂಬರಿ ಲೋಕ ದಿಂದ. 'ನಿಸರ್ಗ'—ಅಚ್ಚಾಯಿತೋ ಇಲ್ಲವೋ ಕನ್ನಡ ಜನ ಮಿರ್ಜಿಯವರ ನೈಸರ್ಗಿಕ ಪ್ರತಿಭೆಯನ್ನು ಕಂಡು, ಮಾರುಹೋಯಿತು. ನಿಸರ್ಗವನ್ನು ಹಿಂಬಾಲಿಸಿಕೊಂಡು, ರಾಷ್ಟ್ರಪುರುಷ, ರಾಮಣ್ಣ ಮಾಸ್ತರ, ಅಶೋಕಚಕ್ರ, ಭಸ್ಮಾಸುರ ಮುಂತಾದ ಕಾದಂಬರಿಗಳು ಕಾಣಿಸಿಕೊಂಡವು. ಅವರ ನಿಸರ್ಗ, ಕಾದಂಬರಿ ಲೋಕದ ಧೃವತಾರೆ.

ಕಾದಂಬರಿಗಳು ಲೌಕಿಕ ಗ್ರಂಥಗಳಾದವು. ಆದರೆ ಧಾರ್ಮಿಕ ಲೋಕದ ಪರಿಚಯ ಮಾಡಿಕೊಡದೆ ಯಾವ ಜೈನಕವಿ ತಾನೆ ಸುಮ್ಮನಿರ ಲಾದೀತು? ಪಂಪನನ್ನು ನೋಡಿ! ಭಾರತ ಲೌಕಿಕಕ್ಕೆ ಆದಿಪುರಾಣ ಜಿನಾ ಗಮಕ್ಕೆ; ಪೊನ್ನ-ರನ್ನರೂ ಇಹ ಪರಗಳೆರಡರ ಸಾಹಿತ್ಯವನ್ನೂ ಕನ್ನಡಿಗರಿ ಗಿತ್ತರು. ಮಿರ್ಜಿಯವರು ಹಿಂದಣ ರತ್ನತ್ರಯರಂತೆ ತಾವೂ ಆಗಮಿಕ ಗ್ರಂಥವನ್ನು ಬರೆಯದೆ ಬಿಡಲಿಲ್ಲ.

ಮಿರ್ಜಿಯವರ 'ಜೈನಧರ್ಮ' ಕನ್ನಡದಲ್ಲಿರುವ ಧಾರ್ಮಿಕ ಗ್ರಂಥಗಳಲ್ಲಿ ಶ್ರೇಷ್ಠವಾದುದು. ಇಂಥ ಬೃಹದ್‌ಗ್ರಂಥ ಕನ್ನಡದಲ್ಲಿ ವಿರಳ. ಜೈನಧರ್ಮದ ನಾನಾ ಮುಖಗಳ ಸಮಗ್ರ ಪರಿಚಯ ಬೇಕೆನ್ನುವವರು ಈ ಗ್ರಂಥವನ್ನು

ತಪ್ಪದೆ ಅಭ್ಯಾಸಿಸಬೇಕು. ಹಿಂದಣ ಯಾವ ಜೈನ ವಿದ್ವಾಂಸರೂ ಜೈನ ಧರ್ಮವನ್ನು ಮಿರ್ಜಿಯವರಂತೆ ಆಧುನಿಕ ದೃಷ್ಟಿಯಲ್ಲಿ ಕ್ರೋಡೀಕರಿಸಿದವರು ಕನ್ನಡದಲ್ಲಂತೂ ಇಂದಿನ ತನಕ ಯಾರೂ ಇಲ್ಲ. ಅಂತು ಆಧುನಿಕ ರತ್ನ ತ್ರಯರಲ್ಲಿ ಮಿರ್ಜಿಯವರೂ ಒಬ್ಬರಾಗಿ ಜೈನ ಧರ್ಮಕ್ಕಾಗಿ, ಕನ್ನಡ ನುಡಿ ಗಾಗಿ ಶ್ರಮಿಸುತ್ತಿರುವರು. ಇಂಥ ವಿದ್ವನ್ಮಣಿಗಳನ್ನು ಪಡೆಯುತ್ತಿರುವ ನಾವು ನಿಜವಾಗಿಯೂ ಪುಣ್ಯವಂತರು.

# ಅಣ್ಣಾರಾಯರು ಮತ್ತು 'ನಿಸರ್ಗ'

ಶ್ರೀ. ನಿರಂಜನರು, ಮೈಸೂರು.

ಮಿರ್ಜಿ ಅಣ್ಣಾರಾಯರೊಬ್ಬರು ಸರಳ ಜೀವಿ. ಅದರಂತೆ ಅವರ ಕಾದಂಬರಿ 'ನಿಸರ್ಗ'ವೂ ಸರಳ ಕೃತಿ.

ಆ ನಾನ್ನೂರು ಪುಟ, ಓದುಗರ ಹೃದಯ ಕೆದಕುವ, ಕರುಳು ಕೊಯ್ಯುವ, ಸುಖದ ದುಃಖದ ನಾಲ್ಕು ಹನಿ ಕಣ್ಣೀರು ಸುರಿಸುವ, ತಲೆ ಬಾಗುವಂತೆ, ಮನ ಭಾರವಾಗುವಂತೆ ಮಾಡುವ ಒಂದು ಸುಂದರ ಕಾವ್ಯ.

ಆರ್ಥಿಕ ವಿಷಮತೆಯಿಂದ ಕುಸಿದು ಬಿದ್ದಿರುವ, ಅಜ್ಞಾನ ಕಂದಾಚಾರ ಗಳಿಂದ ಹೊಲಸುಗೊಂಡಿರುವ, ಜೀವ ಜೀವಗಳನ್ನು ಅನ್ಯಾಯವಾಗಿ ಬಲಿ ತೆಗೆದುಕೊಳ್ಳುತ್ತಿರುವ, ನಮ್ಮ ಸಮಾಜದ ಒಂದು ಅನುಪಮ ಚಿತ್ರ ಅಣ್ಣಾ ರಾಯರ ಕಾದಂಬರಿ.

ಕುರುಡುತನದ ಜಾಡ್ಯ ಹಿಡಿದಿರುವ ನಮ್ಮ ಸಮಾಜದಲ್ಲಿ ತಾರೆ ಅನಂತ ರಂಥವರು ನಾವಿರ ನಾವಿರವಿದ್ದರೆ ಚಿನ್ನದಂಥ ಜೀವಗಳನ್ನು—ಹುಡುಗ ಹುಡುಗಿಯರನ್ನು—ಬಲಿಕೊಡುವ ಹೇಯ ಕೃತ್ಯ ಇನ್ನೂ ಕೊನೆ ಇಲ್ಲದೆ ನಡೆದಿದೆ.

* * * * * *

'ನಿಸರ್ಗ' ಒಡೆದ ಬಾಳಿನ ಜೀವನ ಕಥೆ.

ಎಳೆಯ ಹುಡುಗಿ ತಾರೆಗೆ ಲಗ್ನವಾಗಿದೆ. ಆದರೆ ಗಂಡನೆಂದರೇನೆಂಬು ದನ್ನು ಆಕೆ ತಿಳಿಯಳು. "ಪಾರಿವಾಳ ಪಟಕ್ . . . ಎಣ್ಣೀ ಜಟಕ್ . . . ಬೆಕ್ಕಿಗೆ ಹಾಲಿಲ್ಲ . . . ನಾಯಿಗೆ ನುಚ್ಚಿಲ್ಲ . . . "—ಎಂದು ಇತರ ಎಳೆಯ ರೊಡನೆ ತಾರಾ ಕಣ್ಣುಮುಚ್ಚಾಲೆಯಾಡುತ್ತಾಳೆ.

ಆಟದಲ್ಲೂ ಮದುವೆಯಿದೆ. ಮದುವೆಯಾಟದಲ್ಲಿ ತಾರೆಯೇ ವಧು . . . ಗಂಡನಾಗುವಾತ ತಾರೆಯ ಸಂಬಂಧಿಕ ಅನಂತ . . . ಆಕೆಗಿಂತಲೂ ಎಳೆಯ.

ಆದರೆ ಜೀವನದಲ್ಲಿ ಅನಂತನ ಮದುವೆ ಬೇರೊಂದು ಕರಿಯ ಹುಡುಗಿ ಯೊಡನೆ ಆಗಿ ಹೋಗಿದೆ.

. . . ನೆರೆದವರು ಕೇಳುತ್ತಾರೆ: "ತಾರಾ! ನಿನ್ನ ಗಂಡನ ಹೆಸರು ಹೇಳು."

ನಾಚುತ್ತ ಹುಡುಗಿ ತಾರಾ ಉತ್ತರ ಕೊಡುತ್ತಾಳೆ: "ಜೋಡೆಳಿ ಮುತ್ತ ಜೋಮಾಲಿ ಸರಾ, ಎಂಟೆಳಿ ಮುತ್ತ ಕಂಠೀಸರಾ, ಒಂಟಿಮ್ಯಾಲ ಕೂತ ಫೋಣಿಸತಾರ, ಆನಿಮ್ಯಾಲ ಕೂತ ದಾನಮಾಡತಾರ, ಮಂಚದಮ್ಯಾಲ ಕೂತ ಮಗನ ಆಡಿಸತಾರ, ಅಕ್ಕಿ ಚೀಲದಮ್ಯಾಲ ಕೂತ ಲೆಕ್ಕಾ ಮಾಡತಾರ, ಲೆಕ್ಕ ಬರೂಲ್ಲ ಆದಾಗ ಅಕ್ಕನ ಕರದ ಕೇಳತಾರ . . . ಭ . . . ರ . . . ಮ . . . ಗೊಂ . . . ಡ!" ಭರಮ ಎನ್ನುವುದು ತಾರೆಯ ಗಂಡನ ಹೆಸರು.

ಹೆಂಗಸರೆಲ್ಲ ಗೊಳ್ಳೆಂದು ನಗುತ್ತಾರೆ.

ತಾವು ಬೆಂಕಿಯೊಡನೆ,—ತಮ್ಮ ಹಸುಗೂಸುಗಳ ಭವಿತವ್ಯದೊಡನೆ—ಆಟವಾಡುತ್ತಿರುವುದರ ಕಲ್ಪನೆ ಆ ಹಳ್ಳಿಗರಿಗಿಲ್ಲ. ಹುಟ್ಟಿದ ಕೂಸಿಗೆ ಲಗ್ನ; ಆ ಮೇಲೆ ಮೊಮ್ಮಗುವಿನ ಮುಖನೋಡುವುದು–ಅವರ ನರಕಯಾತನೆಯಲ್ಲಿ, ಸಂಕಟದ ಜೀವನದಲ್ಲಿ. ಅದೇ ಅವರ ಸುಖ, ಆನಂದ!

ಮದುವೆಯೆಂದರೆ ಅದೊಂದು ವ್ಯವಹಾರವೂ ಕೂಡಾ. ತಮ್ಮ ಅಲ್ಪ ಸ್ವಲ್ಪ ಆಸ್ತಿ ಸಂಪತ್ತು ಲಗ್ನದ ಪರಿಣಾಮವಾಗಿ, ತಮ್ಮ ರಕ್ತಸಂಬಂಧಿಗಳಲ್ಲೇ ಉಳಿಯಬೇಕು. ಆ ಮನೆ ಈ ಮನೆಗಳ ಐಶ್ವರ್ಯ ಒಂದಾಗಬೇಕು. ಇದು ಅವರ ಹಂಬಲ.

ತಾರೆಯ ಅತ್ತೆ ಚಿಮ್ಮವ್ವ, ಆಕೆಯ ತಂದೆಯ ತಂಗಿ. ಆದರೆ ಮಗನನ್ನೂ ಸೊಸೆಯನ್ನೂ ಆಕೆ ಎಂದೂ ಒಂದುಗೂಡಲು ಬಿಡುವವಳಲ್ಲ.

ತಾರಾ ಪುಷ್ಪವತಿಯಾದಳು; ಬೆಳೆದಳು. ಗಂಡ ಭರಮ 'ಬೋದಾಳ ಭೀಮ'ನಾಗಿಯೇ ಉಳಿದ.

ತಾರೆಯ ನಾಯಿ ಬಾಳಿನಲ್ಲಿ, ಆಗಾಗ್ಗೆ ಅದೇ ಊರಲ್ಲಿದ್ದ ತಾಯಿ ಮನೆಗೆ ಹೋಗುವುದು, ಶಾಲೆ ಕಲಿಯುವ ಅನಂತ ಚಂದೂರಿಗೆ ಅತ್ತೆಮನೆಗೆ ಬಂದಾಗ ಅವನೊಡನೆ ಹರಟೆ ಹೊಡೆಯುವುದು, ಇದೊಂದೇ ಇದ್ದ ಸುಖ.

ಭರಮ ತಾರೆಯನ್ನು ಪ್ರೀತಿಸುತ್ತಿದ್ದ. ಆದರೆ ತಾಯಿಯ ಎದುರಿನಲ್ಲಿ ಆ ಪ್ರೀತಿಯನ್ನು ವ್ಯಕ್ತಪಡಿಸುವಂತಿರಲಿಲ್ಲ. ಒಮ್ಮೆ ತಾರೆಗೆ ಸೀಬೆ ಹಣ್ಣು ಕೊಡಬೇಕೆಂದು ಭರಮ ಖಂಡಿತ ಮಾಡಿದ. ಕೊಡುವ ಧೈರ್ಯವಿಲ್ಲ. ತಮ್ಮ ಹೊಲದ ಕೊಟ್ಟಿಗೆಗೆ ಕಸಗುಡಿಸಲೆಂದು ತಾರೆ ದಿನಾಲೂ ಬರುವಳು. ಕಸದ ಬುಟ್ಟಿಯ ಬಳಿ ಹಣ್ಣು ಬಚ್ಚಿಟ್ಟರೆ ಆಕೆಗೆ ಸಿಗುವುದು. ತಾರಾ ತಿನ್ನುವಳು . . . ಆಗ ಮಾತಾಡಿಸಬೇಕು . . . ಇದೆಲ್ಲ ಭರಮನ ಗಾಳಿಗೋಪುರ.

ಆದರೆ ಮರುದಿನ ಬೆಳಿಗ್ಗೆ ತಾರೆಯು ಬದಲು ತಾಯಿಯೇ ಬಂದಳು. ಹೆಂಡತಿಗೆ ಹಣ್ಣು ಕೊಡುವ ಧೈರ್ಯ ತೋರಿದ ಮಗನನ್ನು ಅರೆದು ತಿಂದಳು.

ಮಗಳ ಬಾಳು ದುಃಖಮಯವಾಗುತ್ತಿರುವುದನ್ನು ಕಂಡು ರತ್ನವ್ವನಿಗೆ ಕಸಿವಿಸಿ. ಗಂಡು ಕೂಸಿಲ್ಲದ ಆಕೆಗೆ ತಾರಕ್ಕನೇ ಸರ್ವಸ್ವ.

"ತಾರಕ್ಕನಿಗೆ ಸೀಬೆ ಹಣ್ಣು ಕೊಡಬೇಕೆಂದು ಅಳಿಯನ ಮನಸ್ಸಿಗೆ ಬಂತಲ್ಲ!" ಎಂಬುದಷ್ಟೇ ಅವಳಿಗೆ ಎಷ್ಟೋ ಸಂತೋಷ ಉಂಟುಮಾಡಿತು.

ತಾರೆಯು ಮಾವ ಹೂವಣ್ಣ ತನ್ನ ಹೆಂಡತಿ ಚಿಮ್ಮವ್ವಗೆ ಹೇಳುತ್ತಾನೆ: "ನರಿ ಹರೆಯದವರಿಗೆ ಮೊಮ್ಮಕ್ಕಳಾದವು" ಎಂತ. ಆದರೆ ಹೆಂಡತಿಯು ಬಿರು ದೃಷ್ಟಿಗೆ ಹೆದರಿ, ನೊರಗಿ ಸೊರಗಿ ಸುಟ್ಟು ಸುಣ್ಣವಾಗುತ್ತಾನೆ. ಸುಣ್ಣವಾಗಿ ಸಾಯುತ್ತಾನೆ.

ಭೀಮಶಿ ಕಾಕಾನ ಮನೆಗೆ ಹೋಗಿ, ಬೇರೆಯೇ ಇರಬೇಕೆಂದು ಒಮ್ಮೆ ಭರಮ ಎಣಿಕೆ ಹಾಕಿದ. ತಾರೆಯು ಮನ ಒಲಿಸಲು ಯತ್ನಿಸಿದ. ಆದರೆ ಮನೆಯ ಸಾಲ ತೀರಿಸಲಿಕ್ಕೆ ಬೇಕಾದ ಹಣವನ್ನು ಚಿಮ್ಮವ್ವ ತನ್ನ ಭಂಡಾರ ದಿಂದ ತೆಗೆದು, ಮಗನಿಗೆ ಕೊಟ್ಟು, ಅವನನ್ನು ತನ್ನ ಬಳಿಯಲ್ಲಿ ಇರಿಸಿ ಕೊಳ್ಳುತ್ತಾಳೆ. ತನ್ನ ಗಂಡನಿಗೆ 'ದುರ್ಬೋಧನೆ' ಮಾಡಿದಳೆಂಬ ಆರೋಪ ಮಾತ್ರ ತಾರೆಯು ಮೇಲೆ ಬರುತ್ತದೆ.

ಅನಂತ ರಜಾದಿನಗಳಲ್ಲಿ ಊರಿಗೆ ಬಂದಾಗಲೆಲ್ಲ ತಾರೆ—ಅನಂತರ ಸ್ನೇಹಲತೆ ಬೆಳೆಯುತ್ತಿತ್ತು. ಅನಂತನನ್ನು ಕಂಡಾಗ ತಾರೆಯು ಬಾಡಿದ ಜೀವ ಬೆಳಗುತ್ತಿತ್ತು. ಅನಂತ ಸುಖಿಯಾಗುತ್ತಿದ್ದ. ನೈಸರ್ಗಿಕವಾದ ಅವರ ಪ್ರೇಮ ಪರಸ್ಪರ ದೇಹ ಸಂಬಂಧದಲ್ಲಿ ಸಹಜವಾಗಿಯೇ ಕೊನೆಗಾಣುತ್ತದೆ.

ಈ ಘಟನೆಯ ಅನಂತರದ ಕಥೆ ರುದ್ರ ಪ್ರವಾಹವಾಗಿ ಸಿಕ್ಕಸಿಕ್ಕುದನ್ನೆಲ್ಲ ಕೊಚ್ಚಿಹಾಕುತ್ತ ಮುಂದೆ ಮುಂದೆ ಸಾಗುತ್ತದೆ.

ಭರಮನ ತಾಯಿ ಅವನಿಗೆ ಬೇರೆ ಹುಡುಗಿಯನ್ನು ತರುತ್ತಾಳೆ.

ಹಾಯ್‌ಸ್ಕೂಲಿನಲ್ಲಿ ಓದುವ ಅನಂತ ಅಂಜುತ್ತಂಜುತ್ತ ತಮ್ಮ ಊರಲ್ಲಿ ತಾಯಿಯೊಡನೆ "ಆಕೆಯ ಗಂಡನ ಮದುವೆ ಮಾಡಿದರು, ಈಕೆಗೆ ಏನು?" ಎಂದು ಕೇಳುತ್ತಾನೆ. ತಾಯಿ ಸುಂದರವ್ವ ಎನ್ನುವದಿಷ್ಟೆ: "ಗಂಡಸಪ್ಪ ಅವ; ಹೆಂಗಸಂದರ ಮಣ್ಣಿನ ಗಡಿಗಿ ಇದ್ದಾಂಗ. ಒಮ್ಮೆ ಮುಟ್ಟಿದರ ಕೆಟ್ಟಹೋಯ್ತು!"

ಅನಂತ,—ಜೀವನದಲ್ಲಿ ಗೊತ್ತುಗುರಿಯಿಲ್ಲದ, ನಿರ್ದಿಷ್ಟ ಧ್ಯೇಯವಿಲ್ಲದ

ಅನಂತ—ವಾತಾವರಣದ ಶಿಶುವಾಗಿ ಬಾಗಿ ಹೋಗುತ್ತಾನೆ. ತಾರೆಯನ್ನೂ ಹತ್ತರ ಬರಗೊಡುವದಿಲ್ಲ. ಅದು ಅವನ ಬಾಳಿನ ಪರಾಭವ; ಅವನತಿಯ ಮೊದಲ ಹಂತ.

ತಾರೆಯನ್ನು ಇನ್ನೊಬ್ಬ ಮಧ್ಯವಯಸ್ಕನಿಗೆ 'ಉಡಿಕಿ' ಮಾಡಿಕೊಡುತ್ತಾರೆ. ಅದೊಂದು ಮಸಣ ಸಮಾರಂಭ.

ಅನಂತ ಸೂಳೆಯರ ಸಾಮೀಪ್ಯದಲ್ಲಿ ಹೊತ್ತು ಕಳೆಯುತ್ತಾನೆ. ಶೈಶವದಲ್ಲಿ ಅವನ ಕೈಹಿಡಿದಿದ್ದ ಕರಿಯ ಇಂದಿರಾ ಮೈನೆರೆದು ಮನೆಗೆ ಬರುತ್ತಾಳೆ.

ಎಲ್ಲ ದೇಹಗಳನ್ನು ದಹಿಸುತ್ತಿದ್ದ ಉರಿಗೆ ಆಕೆಯೂ ಒಂದು ಆಹುತಿ.

ತಾರಾ ಹೆರುವುದಿಲ್ಲ. ತನ್ನ ಗಂಡನಿಗೆ ಅದೇ ಊರಿನ ನಾನಿಯೊಬ್ಬಳಲ್ಲಿ ಹುಟ್ಟಿದ ಹೆಣ್ಣು ಮಗುವನ್ನು ಪ್ರೀತಿಯಿಂದ ಆಕೆ ಪಾಲಿಸುತ್ತಾಳೆ.

ಒಮ್ಮೆ ತಾರೆಗೆ ಗರ್ಭಸ್ರಾವವಾಯಿತು. ಅನಂತ ಕ್ಷಯರೋಗಿಯಾಗಿ ಮನೆಬಿಟ್ಟು, ಎಲ್ಲಿಯೋ ತೆರಳಿದನೆಂದು ಸುದ್ದಿ ತಿಳಿದುದೇ ಇದಕ್ಕೆ ಕಾರಣ.

ಪ್ರಮೇಹ ರೋಗಿಯಾಗಿ, ತಾರೆ ಕಣ್ಣುಮುಚ್ಚುತ್ತಾಳೆ. ಉರಿಯುವ ಚಿತೆಯ ಕಡೆಗೆ ಯಾವ ಊರಿಂದಲೋ ಬಂದ ಅನಂತ ಧಾವಿಸಿ, ನಿಶ್ಚೇಷ್ಟಿತನಾಗಿ ಉರುಳುತ್ತಾನೆ.

* * * * * *

ಚಿತೆಯ ಬಳಿ ಇದ್ದವರು ಕೇಳುತ್ತಾರೆ: "ಹಂಗ್ಯಾಕ? ಹಂಗ್ಯಾಕ?" ಎಂತ.

"ಹೀಗೆ ಯಾಕೆ?"—ಎನ್ನುವ ಈ ಸವಾಲಿನ ಉತ್ತರ ಯಾರು ಕೊಡುವವರು?

ಈ ಕೂಟ ಪ್ರಶ್ನೆಯನ್ನು ಮುಂದಿಟ್ಟು ಮುಕ್ತಾಯವಾಗುವ ಈ ಕಾದಂಬರಿ ಅಮೂಲ್ಯವಾದುದು. ಇಪ್ಪತ್ತನೆಯ ಶತಮಾನ ಎರಡು ಮೂರನೆಯ ದಶಕಗಳ ಕನ್ನಡ ಸಮಾಜದ—ಜೈನ ವಿಭಾಗದ—ಜನಜೀವನದ ಸಾಹಿತ್ಯಿಕ ಇತಿಹಾಸವಿದು.

ಅಣ್ಣಾರಾಯರ ಶೈಲಿ, ಭಾಷಾ ಪ್ರಯೋಗ, ದೇಸಿ ಪದಗಳು—ಇವೆಲ್ಲ ಕನ್ನಡದ ಸಂಪತ್ತು.

"ನಮ್ಮ ಒಡಕು ನಸೀಬ" ಎಂದು ಆ ಬೆಳಗಾಂವಿ ಜಿಲ್ಹೆಯ ಹಳ್ಳಿಗರಿಂದ ಹೇಳಿಸಿ, "ಇದು ದುರ್ದೈವವಲ್ಲ; ಈ ಸ್ಥಿತಿಯನ್ನು ನಾವು ಬದಲಿಸಬೇಕು." ಎಂಬ ವಿಚಾರಕ್ರಾಂತಿಯನ್ನು ಮಿರ್ಜಿ ಉಂಟುಮಾಡುತ್ತಾರೆ.

ತಾರಕ್ಕನ ತಾಯಿ ಅನಂತನಿಗೆ ತಮ್ಮ ಮನೆಯ ಉಂಡಿ (ಲಾಡು) ಕೊಡುತ್ತಾಳೆ. ಎಣ್ಣೆ ಉಪಯೋಗಿಸುವ ಬಡವರು ಅವರು. ಆದರೆ ಅನಂತನ ತಾಯಿ ಸುಂದರವ್ವ ತುಪ್ಪದ ಉಂಡಿ, ಊರಿನಿಂದ ತಾನು ತಂದು ದನ್ನು ತನ್ನ ಮಗನಿಗೆ ಗುಪ್ತವಾಗಿ ಕೊಟ್ಟು, ಎಣ್ಣೆಯದನ್ನು ತೆಗೆದಿಡು ತ್ತಾಳೆ.

ಸುಂದರವ್ವನಿಗೆ ತಾರೆ ಎಂದರೆ ತಾರೆಯ ತಾಯಿ ಎಂದರೆ ಬಲು ಪ್ರೀತಿ. ಆದರೆ ಪುತ್ರವಾತ್ಸಲ್ಯ ಮುಖ್ಯ!

ಇಂಥ ಹಲವೊಂದು ಸನ್ನಿವೇಶಗಳನ್ನು ಓದುಗರು ಎಂದಿಗೂ ಮರೆಯು ವುದು ಸಾಧ್ಯವಿಲ್ಲ.

ಮಾನವ ವ್ಯಾಪಾರಗಳು ನಿಸರ್ಗ ನಿಯಮಕ್ಕನುಸಾರವಾಗಿ ಆಗುತ್ತವೆ. ಆದರೆ ಆ ಬಾಳು? ಅದರ ವಾತಾವರಣ? ಕಾದಂಬರಿಯನ್ನೋದಿ ಮುಗಿಸಿ ದಾಗ ಮೈ ಜುಮ್ಮೆನ್ನುತ್ತದೆ.

ಅಣ್ಣಾರಾಯರು ಚಿತ್ರಿಸಿದ ಐನಾಪುರ-ತೇರದಾಳ ಬೇರೆಯಲ್ಲ; ಮಂಡ್ಯ- ಅರಸೀಕೆರೆ ಬೇರೆಯಲ್ಲ; ಸುಳ್ಯ-ಪುತ್ತೂರು ಬೇರೆಯಲ್ಲ.

'ನಿಸರ್ಗ' ಜೀವನದ ಒಂದು ಕೈಪಿಡಿ. ಸಮಾಜಸ್ಥಿತಿಯಲ್ಲಿ ಕ್ರಾಂತಿ ಕಾರಕ ಬದಲಾವಣೆಯಾಗಬೇಕೆಂದು ಇಚ್ಛಿಸುವವರು, ಹೊಸ ನಾಡನ್ನು ನಿರ್ಮಿಸಬೇಕೆಂದು ಹಂಬಲಿಸುವವರು, ಅವಶ್ಯ ಓದಬೇಕಾದ ಕಾದಂಬರಿ 'ನಿಸರ್ಗ'. ಆಗ ಹೊಸ ಸೃಷ್ಟಿಯ ಕೆಲಸ ಎಷ್ಟು ಹಿಮಾಲಯ ಸಮಾನ ವಾದುದು, ಗಡುತರವಾದುದು ಎಂದು ಗೊತ್ತಾಗುತ್ತದೆ.

*    *    *    *    *    *

. . . . ಮಿರ್ಜಿ ಅಣ್ಣಾರಾಯರ ಕನ್ನಡ ನಾಡಿನ ಸಂಪತ್ತು, ಹೆಮ್ಮೆ, ಹಿರಿಮೆ.

ಅಣ್ಣಾರಾಯರು ಇಂಗ್ಲಿಷ್ ಶಾಲೆಗೆ ಹೋಗಿಲ್ಲ. ಆದರೆ ಕನ್ನಡದಲ್ಲಿ ಸಿಗುವ ಅಲ್ಪ ಸ್ವಲ್ಪ ವಿಷಯಗಳನ್ನು ಸೂಕ್ಷ್ಮವಾಗಿ ಗ್ರಹಿಸಿ, ಹಿರಿದುಗೊಳಿಸಿ, ಅತ್ಯಾಶ್ಚರ್ಯಕರವಾದ ರೀತಿಯಲ್ಲಿ ಜ್ಞಾನಾರ್ಜನೆ ಮಾಡಿದ್ದಾರೆ.

ಮಿರ್ಜಿ ವಾಸಿಸುವ ಊರು ನೇಡಬಾಳ. ಕರ್ನಾಟಕದ ಉತ್ತರ ಗಡಿನಾಡು ಆ ಹಳ್ಳಿ. ನಾಲ್ಕು ಮೈಲಿಗಳಾಚೆ ಉಗಾರದಲ್ಲಿ ಕನ್ನಡ ಶಾಲೆಯ ಅಧ್ಯಾಪಕರಾಗಿದ್ದಾಗ ಮಿರ್ಜಿ 'ನಿಸರ್ಗ'ವನ್ನು ಬರೆದರು. ಹಾದಿಯುದ್ದಕ್ಕೂ

ಒಬ್ಬರೇ ಮನೆಗೆ ಬರುತ್ತ ತಮ್ಮ ಕೃತಿಯ ಒಂದೊಂದೇ ಅಧ್ಯಾಯವನ್ನು ಮನಸ್ಸಿನಲ್ಲೇ ರಚಿಸುತ್ತಿದ್ದ ರಹಸ್ಯ ರೋಮಾಂಚಕರವಾದುದು!

ಸಾಂಗ್ಲಿ – ಕೊಲ್ಹಾಪುರ – ಮಿರಜ್ ಆಶ್ರಿತ ಸಂಸ್ಥಾನಗಳ ಸಮೀಪದಲ್ಲಿತ್ತು ಸೇಡಬಾಳ. ಮೊನ್ನೆ ಮಿರಜಿನಿಂದ ಬರುತ್ತ ಸೇಡಬಾಳದಲ್ಲಿಳಿದು ಅವರ ಮನೆಗೆ ಹೋಗಿ, ಅವರು ಕಲಿತ ಕನ್ನಡ ಶಾಲೆಯನ್ನು ನೋಡಿ ಬಂದೆ.

ಹೊಲದಲ್ಲಿ ದುಡಿದು, ಬೇಳೆಕಾಳು ಬೆಳೆಸುವ ಮಣ್ಣಿನ ಮಕ್ಕಳ ಕುಟುಂಬ ಮಿರ್ಜಿಯವರದು.

ಕೆಲವು ವರ್ಷಗಳ ಹಿಂದೆ ಸಾರ್ವತ್ರಿಕ ಮುಷ್ಕರ ಹೂಡಿದ ಮುಂಬಯಿ ಪ್ರಾಂತದ ನಲವತ್ತು ಸಾವಿರ ಅಧ್ಯಾಪಕರಲ್ಲಿ ಅಣ್ಣಾರಾಯರೂ ಒಬ್ಬರು.

ಇಪ್ಪತ್ತೆಂಟು ವರ್ಷ ವಯಸ್ಸಿನ ಈ ಯುವಕರು ಕನ್ನಡ ಸಾಹಿತ್ಯ ಲೋಕಕ್ಕೆ ಅಪರಿಚಿತರೇನೂ ಆಗಿರಲಿಲ್ಲ. ಆದರೆ 'ನಿಸರ್ಗ' ಕಾದಂಬರಿ ಅವರ ಜೀವನದಲ್ಲೊಂದು ಹೊಸ ಅಧ್ಯಾಯವನ್ನೇ ತೆರೆಯಿತು.

ಕಾದಂಬರಿಕಾರ ಅಣ್ಣಾರಾಯರ ೭೨೦ ಪುಟದ 'ರಾಷ್ಟ್ರಪುರುಷ' ಅಚ್ಚಾಗಿದೆ. ರಾಜಕೀಯ ಹಿನ್ನೆಲೆಯ ಈ ಬೃಹತ್ ಕಾದಂಬರಿ ಸಾಹಿತ್ಯಕ್ಷೇತ್ರದ ಕೊರತೆಯನ್ನು ನಿವಾರಿಸಲು ನೆರವಾಗುವದು.

'ರಾಮಣ್ಣ ಮಾಸ್ತರು' ಎಂಬ ಚಿಕ್ಕ ಕಾದಂಬರಿಯೊಂದನ್ನೂ ಇದೇ ಈಗ ಬರೆದು ಮುಗಿಸಿದ್ದಾರೆ. ಕನ್ನಡ ಶಾಲೆಯ ಬಡ ಅಧ್ಯಾಪಕರ ಜೀವನ ಅದು. ಅವರ ಪಾಲಿಗೆ ಮುಗಿದ ಯುದ್ಧವಲ್ಲ ಅದು; ಮುಗಿಯದ ಯುದ್ಧ. ಆ ಮಾಸ್ತರ ನಿರಾಶನಾಗಿ ಕಣ್ಣುಮುಚ್ಚುವದಿಲ್ಲ. ಯೋಧನಾಗಿ ಮುಂದಡಿ ಇಡುತ್ತಾನೆ.

ಅವರ 'ಪ್ರತಿಸರಕಾರ'ದ ಪ್ರಕಾಶನ ನಡೆದಿದೆ.

"ನಾವಿಕರ ಬಂಡಾಯದ ಹಿನ್ನೆಲೆ ತಗೊಂಡು 'ಬಂಡಾಯ' ಎಂತ ಚಿಕ್ಕ ಕಾದಂಬರಿಯೊಂದನ್ನು ಬರೀಬೇಕೂಂತ ಮಾಡೇನಿ . . ." ಎಂದು ಮೊನ್ನೆ ಅವರು ಒಮ್ಮೆಲೇ ಹೇಳಿದಾಗ ನಾನು ಚಕಿತನಾದೆ. ಸೌಮ್ಯವಾಗಿ, ನಿಶ್ಶಬ್ದವಾಗಿ ಇರುವ ಅಣ್ಣಾರಾಯರ ಹೊರ ಆವರಣದೊಳಗೆ ಎಂಥ ಸಾಗರ ಭೋರ್ಗರೆಯುತ್ತಿದೆಯೋ, ಯಾವ ಜಲಪಾತವಾಗುತ್ತಿದೆಯೋ, ಯಾವ ಜ್ವಾಲಾಮುಖಿಯಿದೆಯೋ ಹೇಳುವುದು ಕಷ್ಟ.

ಸಾಹಿತ್ಯದ ಬಗೆಗೆ ಇವರು ಬಹಳ ಅಭ್ಯಾಸ ಮಾಡಿದ್ದಾರೆ. ಬೇಂದ್ರೆಯವರ ಕೃತಿಗಳ ಬಗೆಗೆ ಅವರು ಬರೆದ 'ದತ್ತವಾಣಿ' ಈಗಾಗಲೇ ಅಚ್ಚಾಗಿದೆ. ಸಾಹಿತ್ಯದ ಎಲ್ಲಾ ಅಂಗಗಳನ್ನು ಅಭ್ಯಾಸಿಸಿ ಬರೆದ 'ಲೇಖನ ಕಲೆ' ಎಂಬುದೊಂದು ಇವರ ತಂತ್ರಗ್ರಂಥವಿದೆ.

ಇಷ್ಟೆಲ್ಲ ತಿಳಿದ ಮೇಲೆ 'ಇನ್ನು ಮುಂದೆ?' ಎಂದು ಯಾರಾದರೂ ಕೇಳಬಹುದು!

ಹತ್ತು ವರ್ಷಗಳ ಹಿಂದೆ ಅವರು ಬರೆದಿದ್ದ 'ಸಾರ್ಥಕ ಸಾಹಿತ್ಯ' ಎಂಬ ಲೇಖನವನ್ನು ನಾನು ಓದಿದ್ದೇನೆ. ಪ್ರಗತಿಶೀಲ ಸಾಹಿತ್ಯದ ಕೂಗು ಅದು.

ಅಣ್ಣಾರಾಯರು ಒಳ್ಳೆಯ ಕನಸುಗಾರ; ನಾಡು ಅಭಿಮಾನದಿಂದ ಕರೆಯಬಹುದಾದ ಪ್ರಗತಿಶೀಲ ಸಾಹಿತಿ.

ಅವರು ಸುಗುಣಗಳ ಖನಿ, ಟೀಕೆ-ವಿಮರ್ಶೆಯನ್ನು ಅವರು ಸ್ವಾಗತಿಸುತ್ತಾರೆ. ಆಶಿಸುತ್ತಾರೆ. "ಅನಂತ-ತಾರೆಯರ ಬಾಂಧವ್ಯ ಬೆಳೆದುದು ನಿಸರ್ಗ ನಿಯಮ. ಆದರೆ ನಾಡಿನ ಜೀವನ ಹಾಗಾಗುವುದು ನಿಸರ್ಗವಲ್ಲ. ಅದಕ್ಕೆ ನಮ್ಮ ಸಾಮಾಜಿಕ, ಆರ್ಥಿಕಸ್ಥಿತಿ ಕಾರಣ. ಅದನ್ನು ನಿಸರ್ಗವೆನ್ನುವುದು ಹೇಗೆ ಸರಿ? ನಾವೆಲ್ಲ ಆ ಸ್ಥಿತಿಯನ್ನು ಬದಲಿಸುವುದು ಮುಖ್ಯ. ಸ್ಥಿತಿ ಏನೆಂದು ತಿಳಿದುಕೊಳ್ಳಲು ನಿಮ್ಮ ಕಾದಂಬರಿ ಎಷ್ಟೋ ಸಹಕಾರಿಯಾಗುತ್ತದೆ. ಅದೇ ಅದರ ಹಿರಿಮೆ."—ಎಂದು ನಾನು ಹೇಳಿದಾಗ ಅವರು ಎದುರಾಡಲಿಲ್ಲ. ಅವರು ಯಾರಿಗೂ ಎದುರಾಡುವುಲ್ಲ. ಸರಿ ಕಂಡರೆ ಸರಿ. ಇಲ್ಲದಿದ್ದರೆ ಇಲ್ಲ.

ಧಾರವಾಡದ ಅಧ್ಯಾಪಕರ ಟ್ರೇನಿಂಗ ಕಾಲೇಜಿನ ಎರಡು ವರ್ಷ ಶಿಕ್ಷಣ ಮುಗಿಸಿ, ಸೇಡಬಾಳಕ್ಕೆ ಹಿಂದಿರುಗಿದ ಅಣ್ಣಾರಾಯರಿಗೆ ಅವರು ಸ್ಥಾಪಿಸಿದ 'ಶಾಂತಿ ಸೇವಾಸದನ' ಎಂಬೊಂದು ಸಂಸ್ಥೆ ಅಲ್ಲಿದೆ. ಅದನ್ನು ಅವರು ಬಲಿಷ್ಠಗೊಳಿಸುವರು. ನಾಡಿನ ಆ ಉತ್ತರ ಗಡಿಯಲ್ಲಿ ಕರ್ನಾಟಕ ಸಂಘಕ್ಕೊಂದು ದೊಡ್ಡ ಕಟ್ಟಡ, ವಾಚನಾಲಯ, ಒಂದು ಮುದ್ರಣಾಲಯ—ಇಷ್ಟನ್ನು ಸಿದ್ಧಗೊಳಿಸಲು ದುಡಿಯುವರು.

ಸೇಡಬಾಳದ ಬಗೆಗೆ ವ್ಯಕ್ತಪಡಿಸುವ ಅವರ ಆಶೆ ಕರ್ನಾಟಕದ ಎಲ್ಲ ಹಳ್ಳಿಗಳಿಗೂ ಅನ್ವಯಿಸುತ್ತದೆ. ಹಿಂದೂಸ್ಥಾನಕ್ಕೂ ಅನ್ವಯಿಸುತ್ತದೆ—ಎಂದು ಧಾರಾಳವಾಗಿ ಹೇಳಬಹುದು.

—೧೯೪೬ 'ಛಾಯಾ'.

# ರಸವಿಮರ್ಶೆಯಲ್ಲಿ 'ನಿಸರ್ಗ'

ಡಾ. ಹಿರೇಮಲ್ಲೂರ ಈಶ್ವರನ್, ಎಂ.ಎ., ಪಿ.ಎಚ್‌ಡಿ. (ಕರ್ನಾಟಕ)
ಬಿ. ಲಿಟ್. (ಆಕ್ಸಫರ್ಡ).

ಮಿರ್ಜಿ ಅಣ್ಣಾರಾಯರನ್ನು ನಾನು ಬಲ್ಲೆ. ಮಿತಭಾಷಿ, ಸರಳಜೀವಿ, ಸತತಾಭ್ಯಾಸಿ ಅಣ್ಣಾರಾಯರು. ಜೀವನದಲ್ಲಿ ಅವರು ನೆಟ್ಟಿರುವ ಶ್ರದ್ಧೆಯೇ 'ನಿಸರ್ಗ' ಸೃಷ್ಟಿಗೆ ಕಾರಣ. ಮುನ್ನೂರು ಅರುವತ್ತೆಂಟು ಪುಟಗಳ ಉದ್ದಕ್ಕೂ ಓಡುತ್ತ ನಡೆದಿರುವ ಕಥೆಯ ಪಂಕ್ತಿ ಪಂಕ್ತಿಗೂ ಲೇಖಕರ ಕಲೆಯ ಅರಿವು ಓದುಗನಿಗೆ ಆಗುತ್ತ ಹೋಗುತ್ತದೆ. ಶೈಲಿಯಲ್ಲಿ ಓಟವುಂಟು. ಸಂವಾದದಲ್ಲಿ ಸರಳತೆಯುಂಟು. ಪಾತ್ರದಲ್ಲಿ ಪರಿಪೂರ್ಣತೆಯುಂಟು. ಕಾದಂಬರಿಯ ಕಥೆಯಲ್ಲಿ ಒಂದು ಕಡೆ ಮುಕ್ಕಿಲ್ಲ, ಅಪಕ್ವತೆಯಿಲ್ಲ, ಅಸ್ವಾಭಾವಿಕತೆಯಿಲ್ಲ. ಅಣ್ಣಾರಾಯರ ಮನಸ್ಸು ಸರಳವಿದ್ದಂತೆ ಕಾದಂಬರಿಯ ಶೈಲಿಯೂ ಸರಳ. ಅವರು ಕಂಡ ಜೀವನ ನೈಸರ್ಗಿಕ; ಕೃತಿಯೂ ಅಂತೆಯೆ.

'ಕಾದಂಬರಿಯ ಕ್ಷೇತ್ರದಲ್ಲಿ ಇದು ನನ್ನ ಮೊದಲನೆಯ ಹೆಜ್ಜೆ'–ಎಂದು ಅರಿಕೆಯಲ್ಲಿ ಲೇಖಕರು ಹೇಳಿದ್ದಾರೆ. ಅಣ್ಣಾರಾಯರು ಸಂಕೋಚಪಡ ಬೇಕಿಲ್ಲ. ಹಿಂದೊಮ್ಮೆ ನಂದಳಿಕೆಯ ಕವಿ ಲಕ್ಷ್ಮೀನಾರಣಪ್ಪನವರು ಅನು ಭವಿಸಿದ ಅವಸ್ಥೆಯನ್ನು ಇಂದು– ಕೃತಿರತ್ನವನ್ನು ಬಿತ್ತರಿಸುವಂತಹ ನಿಮ್ಮಂಥ ಸಾಹಿತ್ಯಭಕ್ತರು ಪಡಬೇಕಾಗಿಲ್ಲ. ನಾರಣಪ್ಪನವರು ಜೀವಿಸುವಂದು ಪಟ್ಟ ದುಃಖ, ನೋವು ನವೆತಗಳನ್ನು ಇಂದು ಕನ್ನಡದ ರಸಿಕಕುಲ ಅರಿತು ಕೊಂಡು, ತನ್ನಷ್ಟಕ್ಕೆ ತಾನು ಅಸಹ್ಯಪಟ್ಟುಕೊಂಡಿದೆ. ನಂದಳಿಕೆಯಂತೆ ನಿಮ್ಮೂರು ಸೇಡಬಾಳ. ಮುದ್ದಣ್ಣನಂತೆ ನೀವು ಹಳ್ಳಿಯ ಶಿಕ್ಷಕರು. ಬರೀ ಕನ್ನಡ ಮುಲ್ಕಿ ಆಗಿದೀರಿ. ಜತೆಗೆ ಸಾಹಿತ್ಯ ಪರಿಷತ್ತಿನ 'ಕನ್ನಡ ಜಾಣ' ಬಿರುದು. "ನಿಮ್ಮ ಕಲಾವಂತಿಕೆಗೆ 'ಕಾರಕೂನ ಓದಿನ' ಅನುಭವ ಇರ ಬೇಕಿತ್ತು." ಎಂದು ಆಡಿಕೊಳ್ಳುವ ಧೈರ್ಯ ಯಾವ ವಿಮರ್ಶಕನಿಗೆ ಬಂದೀತು? 'ನಿಸರ್ಗ' ಕಾದಂಬರಿಯನ್ನು ಓದುಗ ಬಾಯಿತುಂಬ ಹೊಗಳದೆ ವಿಧಿಯಿಲ್ಲ. ಬೆಳಗಾಂವಿ ಜಿಲ್ಲೆ—ಉತ್ತರ ಕರ್ನಾಟಕದ ನಿಮ್ಮ ಭಾಗದಲ್ಲಿ ಲೇಖಕರ ಕೊರತೆಯನ್ನು ಎತ್ತಿ ಹೇಳುವವರಿಗಿಂದು ಹಾಲು–ಸಕ್ಕರೆ ಹಂಚು ವಂತಹ ಪ್ರಸಂಗ ಬಂದಿದೆ. ಜತೆಗೆ ಅಂತಹರ ನುಡಿ 'ನಿಸರ್ಗ' ಕಾದಂಬರಿ

ಪ್ರಪಂಚದಲ್ಲಿ ಮೊದಲ ಹೆಜ್ಜೆ; ಸಂತೋಷ. ಅಂತಹ ಹೆಜ್ಜೆಯನ್ನೇ ಇಕ್ಕುತ್ತ ಅದೇ ಪ್ರಪಂಚದ ಅಂಚನ್ನು ಮುಟ್ಟುವ ಸಾಹಸವಿರಲಿ; ಭಗೀರಥ ಪ್ರಯತ್ನ ವಿರಲಿ.—ಎಂದಿರುವದಾದರೆ ಅಣ್ಣಾರಾಯರು ವಿಶ್ವಾಸದಿಂದ ಅದನ್ನೆತ್ತಿ ಕೊಂಡು, ಮುಂದುವರೆಯಬೇಕು. ಇಷ್ಟರಲ್ಲೆ ನಮ್ಮ ಕಾದಂಬರಿ ಪ್ರಪಂಚ ಹೆರವರ ಕಣ್ಣು ಕುಕ್ಕಿಸೀತು.

'ನಿಸರ್ಗ'ದ ಕಥೆಯನ್ನು ಇಲ್ಲಿ ಸಂಗ್ರಹವಾಗಿ ಹೇಳುವ ಅವಶ್ಯಕತೆ ಇಲ್ಲ. ಜೈನಸಮಾಜದ ಚಿತ್ರವನ್ನು ಚಿತ್ರಿಸುವ ಈ ಕಾದಂಬರಿ ಕನ್ನಡಿಗರ ಮನವನ್ನೆ ಸೂರೆಗೊಳ್ಳುವಂತಹದಾಗಿದೆ. ಬಾಳಿನಲ್ಲಿ ಕಣ್ಣಿಟ್ಟು ನೋಡಿದ ಕಾದಂಬರಿಕಾರರು ಅಲ್ಲಿಯ ಲೋಪದೋಷಗಳನ್ನು, ಕುಂದುಕೊರತೆಗಳನ್ನು ಇದ್ದಂತೆ ಹೇಳುವಂದು ಕಲೆಯ ಹೃದಯವನ್ನೇ ಮೀಟಿದ್ದಾರೆ. ಕತೆಯನ್ನು ಓದುತ್ತ ಸಾಗಿದಂದು ಒಮ್ಮೆ ನಗು, ಒಮ್ಮೆ ರೋಷ, ಒಮ್ಮೆ ಮೌನ, ಒಮ್ಮೆ ತಾತ್ಸಾರ, ಒಮ್ಮೆ ದುಃಖ—ಎಲ್ಲ ಅನುಭವಿಸುತ್ತಾನೆ ಓದುಗ. ಕಾರಣ, ನಿಸರ್ಗಕ್ಕೆ ಹೋಲಿಕೆಯಾಗಿ ಬಂದಿದೆ, ಕಾದಂಬರಿ. ಆದರ್ಶವನ್ನಿಟ್ಟು ಕೊಂಡು ಲೇಖಕರು ಎಲ್ಲಿಯೂ ಹೊರಟಂತೆ ತೋರುವದಿಲ್ಲ. ಪ್ರಾದೇಶಿಕ ಜೀವನವನ್ನು ಬಿಂಬಿಸುವ ಕಾದಂಬರಿಯ ಶೈಲಿ, ಮೊದಮೊದಲು ಹಲವರಿಗೆ ಹಿಡಿಸದೆ ಹೋದೀತು. ಆದರೆ ಪುಟಗಳು ಒಂದರ ಹಿಂದೆ ಒಂದು ಸರಿದಂತೆ ಶೈಲಿಯ ಪರಿಚಯ ಗಾಢವಾಗುತ್ತದೆ; ಕಥಾವಸ್ತು ತೀರ ಸಮೀಪದ್ದಾಗು ತ್ತದೆ; ಲೇಖಕರು ಹತ್ತಿರದವರೇ ಆಗುತ್ತಾರೆ; ಪಾತ್ರಗಳು ಮನೆಯವ ರಂತೆಯೇ ತೋರುತ್ತಾರೆ. ಕಲೆ ಅಷ್ಟು ಸಹಜ, ಪರಿಣಾಮ ಅಷ್ಟು ತೀವ್ರ, ಅನುಭವ ಅಷ್ಟು ಸೂಕ್ಷ್ಮ.

ಕಾದಂಬರಿಯ ನಾಯಕ ನಾಯಿಕೆ — ಅನಂತ ತಾರಕ್ಕ ಯಾವ ಸಮಾಜಕ್ಕೂ ಚಿರಪರಿಚಿತರು. ಚಂದೂರಿನ ಮಗದುಮರ ಮನೆಯ ಮುಂದೆ ಆಟವಾಡುವ ಅನಂತ ತಾರೆಯರ ಪರಿಚಯ ಆದಂದಿನಿಂದ ಮೊದ ಲ್ಗೊಂಡು ಅದೇ ಊರಿನ ಮಸಣದಲ್ಲಿ ಅದೇ ಅನಂತ ತಾರೆಯರು ದೇಹ ಬಿಡುವ ವರೆಗೂ ನಡೆಯುವ ಕಥೆಯಲ್ಲಿ ಉದ್ದಕ್ಕೂ ಸಹಜತೆಯುಂಟು, ವಾಸ್ತವಿಕತೆಯುಂಟು. ನಾಯಕ ನಾಯಿಕೆಯರಲ್ಲಿ ಹಾರಾಗಿ ಜೀವ ತುಂಬು ತ್ತಾರೆ ಲೇಖಕರು. ನಿಸರ್ಗಕ್ಕೆ ಸರಿಯಾಗಿ ಅವರ ಬೆಳವಣಿಗೆ. ಎಲ್ಲಿಯೂ ಹೊರತಾಗಿಲ್ಲ ಅವರ ನಡತೆ. ಸೋದರಮಾವನ ಮಗಳು ತಾರೆಯೊಂದಿಗೆ

ಅನಂತ ಇಟ್ಟುಕೊಂಡ ನಡತೆ ಮೊದಲಲ್ಲಿ ಎಷ್ಟು ಸಹಜವೊ ಕೊನೆಗೂ ಹಾಗೇನೆ. ಕಾಲಚಕ್ರಕ್ಕೆ ಸಿಲುಕಿ, ಸಮಾಜದ ಕ್ರೂರ ಚಕ್ರಕ್ಕೆ ಸಿಲುಕಿ, ತಾರೆ ನೊಂದಳು, ನವೆದಳು, ನೊರಗಿದಳು, ಹಿಂಡಿ ಹಿಪ್ಪಿಯಂತಾದಳು. ಬಾಲ್ಯದಲ್ಲಿ ಅವಳಿಗೆ ಮದುವೆಮಾಡಿದ ದೋಷ ಹಡೆದವರದು; ಹರಯದಲ್ಲಿ ಅಡಕೊತ್ತಿನ ಅಡಕೆಯಂತಿಟ್ಟ ದೋಷ ಅತ್ತೆಯದು; ಏರಿಕೆಯ ಯೌವನದಲ್ಲಿ ಮೋಹವಿಟ್ಟವನ ಕೈಯಿಂದ ಕಸಿದುಹಾಕಿ, ಹುಣ್ಣಿನ ಸುಂಕುರೋಗಕ್ಕೆ ಅಂಟಿದವನ ಉಡಿಯಲ್ಲಿ ತಾರಕ್ಕನನ್ನು ಹಾಕಿದ ತಪ್ಪು ಸಮಾಜದ್ದು. ಅನಂತನ ಜೀವನವೂ ಅದೇ ರೀತಿ. ತೊಟ್ಟಿಲಕ್ಕೆ ಬಾಸಿಗ ಕಟ್ಟಿ, ಅನಂತನ ಮದುವೆ ಯನ್ನು ಮಾಡಿ, ತಂದೆ ತಾಯಿ ಏನು ಉಂಡರು? ನಿಸರ್ಗನಿಯಮ ಹೇಗೆ ತಪ್ಪೀತು? ಕೈಹಿಡಿದ ಇಂದಿರೆಯಲ್ಲಿ ಕಾಮಸಂತೃಪ್ತಿಯನ್ನು ಮಾತ್ರ ಹೊಂದಿದ. ಆದರೆ ನೈಸರ್ಗಿಕ ಪ್ರೇಮಕೂಟದ ರಸಮೂಹೂರ್ತವನ್ನು ಒಂದು ದಿನ ಮಾತ್ರ ತಾರೆಯಲ್ಲಿ ಕಂಡದ್ದನ್ನು ಮತ್ತೆ ಕಂಡನೆ?–ಸುಂದರವಾಗಿ ಇದನ್ನೆ ಕಾದಂಬರಿಕಾರರು ಚಿತ್ರಿಸುತ್ತಾರೆ.

ನಾಯಕ ನಾಯಕಿಯರಲ್ಲಿ ಲೈಂಗಿಕ ದೋಷವಿದೆಯೆಂದು ಯಾರಾದರೂ ಅಂದಾರು. ಅದು ಅನ್ಯಾಯದ ತೀರ್ಮಾನು ಆದೀತು. ಮೈಮೇಲೆ ಹುತ್ತ ಬೆಳೆಯುವಂತೆ ತಪಗೈದ ವಿಶ್ವಾಮಿತ್ರ ಅಂದು ಅರೆನಿಮಿಷ ಮಾತ್ರ ಮೇನಕೆ ಯನ್ನು ಕಂಡಾಗ ಹೊಯ್ದಾಡಿ ಹೋದನಲ್ಲ! ವರುಷ ವರುಷಗಳ ತಪಸ್ಸಿದ್ಧಿ ಯನ್ನು ಮಹರ್ಷಿ ವಿಶ್ವಾಮಿತ್ರ ನಿಮಿಷಗಳ ಸುಖಕ್ಕಾಗಿ ಮಾತ್ರ ಮೇನಕೆಯ ಉಡಿಯಲ್ಲಿ ಹಾಕಿಬಿಟ್ಟು, ಕಾಮಸಂತೃಪ್ತಿ ಹೊಂದಿದನಲ್ಲ! ಅದು ದೋಷ ವೇನು? ಅಂದು ಗಿರಿಜೆಯನ್ನು ಕಂಡ ಶಿವನೆ ಮೈಸುಖಕ್ಕೆ ನೋತನಲ್ಲ! ಅದಕ್ಕೇನು ಉತ್ತರ? ಇದೆಲ್ಲ ಪುರಾಣಕಾಲದ ಮಾತು ಎಂದು ಯಾರಾದರೂ ನುಡಿದಾರು? ಹಾಗಲ್ಲ. ನಿಸರ್ಗದೊಂದು ರೂಢಿಗೆ ಯಾರೂ ಬಾಹಿರರಾಗ ಲಾರರು. 'ಕೋಗಿಲೆ ಕೂಗುವುದು ವಿರಹಿಯನ್ನು ನೋಯಿಸಬೇಕೆಂದಲ್ಲ; ಮಲ್ಲಿಗೆ ಅರಳುವುದು ದುಃಖಿಯನ್ನು ರೇಗಿಸಬೇಕೆಂದಲ್ಲ; ಅದು ಸೃಷ್ಟಿಯ ನಿಯಮ' ಎಂದು ಡಿ. ವಿ. ಜಿ. ಒಂದು ಕಡೆ ಹೇಳಿದ ಮಾತನ್ನೇ ಇಲ್ಲಿಯೂ ಅನಂತ–ತಾರೆಯರ ಜೀವನ ನೋಟಕ್ಕೆ ಹೋಲಿಸಿಕೊಳ್ಳಬಹುದಾಗಿದೆ. ಅವರ ಜೀವನ ರೀತಿ ಹಾಗಾಗಲೆ ಬೇಕಿತ್ತು. ಹಳ್ಳ, ತಗ್ಗು, ದಿನ್ನೆಗಳಲ್ಲಿ, ಇಳುಕಲ ಓವರಿಗಳಲ್ಲಿ ಏಳುತ್ತ ಬೀಳುತ್ತ ಹರಿದು, ಹೊಳೆಯಾಗಿ ಕಡಲ

ಕೂಡುವದೊಂದು ನಿಸರ್ಗದ ನಿಯಮವೆ. ಅನಂತ ತಾರೆಯರ ಬಾಳೂ ಅಂತಹ ಒಂದು ಪ್ರವಾಹ. ಅಷ್ಟು ಕಷ್ಟವಡಬೇಕಿತ್ತು ಅವರು. ಸಮಾಜದ ಲೋಪದೋಷಗಳಿಗೆ, ಹೀನ ಮಾನವರ ಕುಹಕಕೃತ್ಯಗಳಿಗೆ, ಅವರು ತುತ್ತಾಗಬೇಕಿತ್ತು. ಅಂತಹ ವಿಷಮ ಸಮಯದಲ್ಲಿಯೆ ಒಂದು ಜಾವ ಅವರು ಕಂಡ ಸುಖ ನಿಸರ್ಗಕ್ಕೆ ಒಪ್ಪಿಗೆಯಾಯಿತು. ಆ ಒಪ್ಪಿಗೆಯನ್ನೇ ಮುಂದಿಟ್ಟು ಕೊಂಡು, ಬಾಳಬೇಕೆಂದಿದ್ದ ಅವರ ಧ್ಯೇಯ ಮಾತ್ರ ಇಲ್ಲಿ ಸಫಲವಾಗಲಿಲ್ಲ! ಅದೂ ನಿಸರ್ಗ ನಿಯಮವೆ! ಇದನ್ನು 'ಸೈ' ಎನ್ನುವಂತೆ ಪ್ರತಿಪಾದಿಸಿದ್ದಾರೆ ಲೇಖಕರು.

ಅನಂತ ಭಾವಜೀವಿ. ಆತನ ಮನಸ್ಸು ಮಗುವಿನಷ್ಟು ಸರಳ; ಹೂವಿನಷ್ಟು ಮೃದು. ಅನಂತನ ಬಾಲ್ಯಜೀವನವನ್ನು ಸ್ಫುಟವಾಗಿ ಚಿತ್ರಿಸಿದ ಕಾದಂಬರಿಕಾರರು ಅವನ ಮುಂದಿನ ಜೀವನವನ್ನು ಅಷ್ಟೇ ನಿಚ್ಚಳವಾಗಿ ಕೊಡಬಹುದಿತ್ತು. ಆದರೆ ತಾರಕ್ಕನ ಕಡೆಗೆ ಅವರ ಎಲ್ಲ ಲಕ್ಷ್ಯವು ಒಲಿದು ಬಿಟ್ಟದ್ದರಿಂದಲೊ ಏನೊ, ಇಂದಿರೆ, ಭಂಗಾರಿ, ತಾರೆ—ಹೀಗೆ ಮೂವರಲ್ಲಿ ಆಸಕ್ತನಾಗಿ ಅನಂತ ದೌರ್ಬಲ್ಯನಾದನೆಂತಲೊ ಏನೊ, ಕಾದಂಬರಿಕಾರರು ಅವನಿಗೆ ಕ್ಷಯ ಹಚ್ಚಿಸಿ ಬಿಟ್ಟು ನೇರವಾಗಿ ಅವನನ್ನು ತಾರೆಯ ಮಸಣ ದಲ್ಲಿಯೆ ತಂದು ಉರುಳಿಸಿಬಿಡುತ್ತಾರೆ. ಹೆಂಡತಿಯ ಮನೆಯಲ್ಲಿ ಅನ್ನಕ್ಕಾಗಿ ತನ್ನನ್ನು ಮಾರಿಕೊಳ್ಳಲಾಗದೆ ಅನಂತ ತೇರದಾಳ ಬಿಟ್ಟು, ಹೊರಬಿದ್ದ ಸಂಗತಿಯನ್ನು ಓದುಗರು ಮೆಚ್ಚಿಯಾರು. ಆದರೆ ಶಬರಿಯಂತೆ ಕಾಯ್ದು ಕೊಂಡು ಕುಳಿತಿದ್ದ ಆ ತಾರೆಯ ಧ್ಯಾನದ ಅನಂತಾಕಾಶದಲ್ಲೆಲ್ಲ ತಿರುಗಿ ಮೂಡದಂತಹ ಕಾರ್ಗತ್ತಲೆಯನ್ನು ಹರಹಿಹೋದನಲ್ಲ ಅನಂತ! ಎಲ್ಲಿ ಓಡಿತು ಆ ಅನಂತನ ಆತ್ಮಶ್ರೀ? ಆತ್ಮಶ್ರೀ ಎನ್ನುವುದೂ ಅವನಿಗಿದ್ದಿತೆ? ಊಹೂಂ—ಇದನ್ನೆಲ್ಲ ನಾವು ಆರೋಪಿಸಬಾರದು. ನಮ್ಮ ಆದರ್ಶದೃಷ್ಟಿ ಈ ವಿಷಯವನ್ನು ಕೆರಳಿದರೆ ಕ್ಷಣಹೊತ್ತು ಅದನ್ನು ತಡೆಯಬೇಕು. ಏಕೆಂದರೆ ಕಾದಂಬರಿಕಾರರು 'ಏನು ಆಯಿತು?' ಎನ್ನುವದನ್ನು ಮಾತ್ರ ಹೇಳಿದ್ದಾರೆ. 'ಏನಾಗಬೇಕಿತ್ತು?' ಎಂಬುದನ್ನು ಅವರು ಹೇಳಬಾರದು. 'ನಿಸರ್ಗ'ದ ರಹಸ್ಯವೆ ಅಲ್ಲಿದೆ.

ತಾರೆಯ ಪಾತ್ರ ನೋಡಿ, ಅನಂತನ ಚಿತ್ರ ನಾವು ಮರೆಯಬೇಕೆನ್ನು ವಷ್ಟು ಜಾಗ್ರತೆ ಕಾದಂಬರಿಕಾರರು ವಹಿಸಿದ್ದಾರೆಂದು ತೋರುತ್ತದೆ. ಹುಡುಗಿ

ತಾರೆ, ಪ್ರಾಯಕ್ಕೆ ಬಂದ ತಾರೆ, ಉಡುಕಿ ಮಾಡಿಕೊಂಡ ತಾರಕ್ಕ, ಅನಂತನಿಗಾಗಿ ದೇಹವಿಟ್ಟ ತಾರಕ್ಕ—ಈ ನಾಲ್ಕು ಅವಸ್ಥೆಗಳ ಒಂದೊಂದು ಮಟ್ಟಕ್ಕೂ ವಾಸ್ತವಿಕತೆಯ ಬಣ್ಣ ಬಳೆದು ಓದುಗರ ಅಂತಃಕರಣವನ್ನೆ ಮೀಂಟಿ ಜೇವೊಡೆದಿದ್ದಾರೆ. ಅನಂತನಲ್ಲಿ ಅವಳು ಬೆರತದ್ದು, ಅವನಿಗಾಗಿ ಅವಳು ತನ್ನನ್ನೆ ಮುಡಿವಾಗಿರಿಸಿಕೊಂಡಿದ್ದರೂ ಭರಮನ ಮನೆ ಸೇರಿದ್ದು, ಅಪ್ಪಣ್ಣನ ಮನೆ ಸೇರಿದ್ದು, ಮುಂದೆ ಓತು ಬಂದವನಲ್ಲಿ ಸೋತುಹೋದುದು—'ಅನಂತಾ' ಎಂದು ನೆನೆಯುತ್ತ ಚಂದೂರಿನ ಸುಡುಗಾಡು ಸೇರಿದ್ದು—ಇದೆಲ್ಲ ಎಷ್ಟು ಸತ್ಯವಾಗಿ ಬರಬೇಕೋ, ಎಷ್ಟು ನೈಸರ್ಗಿಕವಾಗಿ ಬರಬೇಕೋ ಅಷ್ಟಾಗಿ ಬಂದಿದೆ. ತಾರೆಯನ್ನು ಓದುಗರು ಎಂದಿಗೂ ಮರೆಯುವಂತಿಲ್ಲ. ಮರೆಯುವುದು ಸಾಧ್ಯವೂ ಇಲ್ಲ.

ನಾಯಕ ನಾಯಿಕೆಯರ ಬಗ್ಗೆ ಇಷ್ಟಾಯಿತು. ಆದರೆ ಇವರನ್ನು ನೆನಸಿದ ಮೇಲೆ ಚಿಮ್ಮವ್ವನನ್ನು ಮರೆಯುವದಕ್ಕಾಗುತ್ತದೆಯೆ? ಕಾದಂಬರಿಕಾರರು ಅವಳ ನುಡಿಯಲ್ಲಿ ಧ್ವನಿಸಾಮರ್ಥ್ಯ ತುಂಬಿದ್ದಾರೆ. ಅತ್ತೆಯ ಅಧಿಕಾರವಟ್ಟವನ್ನು ಏರಿದ ಚಿಮ್ಮವ್ವ ಓದುಗರ ಸ್ಮೃತಿಪಥದಿಂದ ಎಂದಿಗೂ ಅಳುಕಿ ಹೋಗಲಾರಳು. ಅವಳ ಕುಟಿಲಕೃತ್ಯಗಳಲ್ಲಿ ನೆರವಾದ ಭೀಮನ ಪಾತ್ರವೂ ಅಷ್ಟೇ ಸಹಜ. ಕಾದಂಬರಿಕಾರರ ತೀಕ್ಷ್ಣ ಸಹಜವಾದ ನೋಟ ಉಳಿದೆಲ್ಲ ಪಾತ್ರಗಳಂತೆ ಅವರಲ್ಲಿಯೂ ಜೀವವನ್ನು ತುಂಬಿಕೊಟ್ಟಿದೆ. ಚಾಂಗಲವ್ವ ಮುದುಕಿ, ನಾಭಿರಾಜ ಎಂದಿಗೂ ನಮ್ಮ ಮಮತೆಗೆ ತಕ್ಕವರು.

ಓದುಗರಿಗೆ ಈ ಎಲ್ಲ ಪಾತ್ರಗಳ ಪರಿಚಯ ಬೇಗ ಆಗಿ ಕೊನೆಯವರೆಗೂ ನಿಲ್ಲುವುದು. ವ್ಯಕ್ತಿಗಳ ಗುಣದೋಷಗಳನ್ನು ಕಂಡುಹಿಡಿದು ಚಿತ್ರಿಸುವಂದು ಕಾದಂಬರಿಕಾರರು ಉತ್ತಮ ಮನೋಬಿಂಬಗ್ರಾಹಿಯೆಂದೆನ್ನಿಸಿಕೊಂಡಿದ್ದಾರೆ. ಪಾತ್ರದ ಹೃದಯವನ್ನೆ ಬಗೆದು ಓದುಗರಿಗೆ ಅಲ್ಲಿಯ ಚಲನವಲನ ಶಕ್ತಿಯನ್ನೆಲ್ಲ ಬಿಡಿಸಿಬಿಡಿಸಿ ಬೆರಳಿಟ್ಟು ತೋರಿದ್ದಾರೆ. ಯಾರೂ ಕೂಡ ಇದನ್ನರಿತುಕೊಳ್ಳಬಲ್ಲರು.

ಪ್ರಾದೇಶಿಕ ಜೀವನ ಬಿಂಬಿಸುವ 'ನಿಸರ್ಗ'ದಲ್ಲಿ ಅಲ್ಲಲ್ಲಿ ಬಂದಿರುವ ರೂಢಿಗಳು, ಸಂಪ್ರದಾಯಗಳು ಇವುಗಳನ್ನರಿಯದ ಕನ್ನಡಿಗರಿಗೆ ಮೊದಲು ಅವು ಹೊಸತೆಂದೆನ್ನಿಸಿದರೂ ಕೊನೆಗೆ ಅರ್ಥವಾಗುವವು. ಸಮಾಜದ ಭಾವುಕನಂಬುಗೆಗಳನ್ನು, ಊರ ದೇವತೆಗಳಿಗೆ ಮಾಡುವ ಹಬ್ಬಗಳನ್ನು,

ಮನೆಯಲ್ಲಿಯ ಆಚಾರವಿಚಾರಗಳನ್ನು ಕಾದಂಬರಿಯ ಕಥೆಯಲ್ಲಿ ಅಲ್ಲಲ್ಲಿ ಎರಕಹೊಯ್ದು, ನಮ್ಮ ಜನಜೀವನದ ವಿಮರ್ಶೆಯನ್ನು ಆ ಮೂಲಕ ಕಾದಂಬರಿಕಾರರು ಮಾಡುವಲ್ಲಿ ದೊಡ್ಡ ಸೇವೆಯನ್ನು ಸಲ್ಲಿಸಿದ್ದಾರೆನ್ನಬೇಕು. ಉಡಿಕಿಯ ರೂಢಿ, ಬಾಲವಿವಾಹ ಪದ್ಧತಿ, ನೆರೆತ ಹೆಣ್ಣನ್ನು ಕೂಡಿಸುವದು—ಇವೆಲ್ಲ ಏನು ಎನ್ನುವುದನ್ನು 'ನಿಸರ್ಗ' ಸುಂದರವಾಗಿ ಚಿತ್ರಿಸಿದೆ.

'ನಿಸರ್ಗ'ದ ಮೂಲಕ ಅಣ್ಣಾರಾಯರು ಕನ್ನಡನುಡಿಗೆ ಒಂದು ಮಹತ್ವಾದ ಸೇವೆಯನ್ನು ಸಲ್ಲಿಸಿದ್ದಾರೆ. ಅವರ ಬಾಳಿನ ಸುತ್ತುಮುತ್ತಲಿನ ದೇಶಿಯ ಬೆಡಗನ್ನು, ಸಹಜವಾದ ನುಡಿಯನ್ನು ಇದ್ದಕ್ಕಿದ್ದಂತೆಯೆ ಕಾದಂಬರಿಯಲ್ಲಿ ಅಳವಡಿಸಿಕೊಂಡು, ಅಣ್ಣಾರಾಯರು ಈ ಮೂಲಕ ಒಂದು ನಿರ್ದಿಷ್ಟವಾದ ಸೇವೆ ಮಾಡಿರುವರು. ಕೇಶಿರಾಜನು ಕೆಲವು ಕನ್ನಡದ ದೇಶಿಗಳನ್ನು ಎತ್ತಿ ಹೇಳುವಂದು 'ಇವು ಕನ್ನಡದೊಳ್ ಚೆಲ್ವು' ಎಂದಿದ್ದಾನೆ. ಕನ್ನಡ ಸಿಂಗರದ ಭಾಷೆಯಾಗಬೇಕಾದರೆ ನಮ್ಮ ನಾಡಿನ ಮೂಲೆಮೂಲೆಯ ದೇಶಿಗಳನ್ನು ಲೇಖಕರು ಪ್ರಯೋಗಕ್ಕೆ ತರಬೇಕು. ದೇಶಿಶಬ್ದಗಳನ್ನು ಸಹಜ ಸೌಂದರ್ಯಕ್ಕೆ ಹೋಲಿಸಬಹುದು. ನಮ್ಮ ನುಡಿಯೊಡತಿಯ ನಿಸರ್ಗ ಸೌಂದರ್ಯವೇ ಅಲ್ಲಿ ಹುದುಗಿರುವುದು. ಈ ದಿಶೆಯಲ್ಲಿ ಪುತ್ತೂರಿನ ಕಾರಂತರು, ಸೇಡಬಾಳದ ಅಣ್ಣಾರಾಯರು ಅಮೌಲ್ಯವಾದ ಸೇವೆ ಸಲ್ಲಿಸಿದುದನ್ನು ಕನ್ನಡಿಗರು ಕೃತಜ್ಞತೆಯಿಂದ ನೆನೆಯಬೇಕು. 'ನಿಸರ್ಗ'ದಂತಹ ಕಥಾವಸ್ತುವನ್ನು ಅಳವಡಿಸಿಕೊಂಡು, ಯಾರಾದರೂ ಕಾದಂಬರಿ ಇಂದಿಲ್ಲ ನಾಳೆ ಬರೆದಾರು. ಆದರೆ ಆ ದೇಶಿಭಾಷೆಯನ್ನು ತಂದು ಕಾದಂಬರಿಯ ಶೈಲಿ ಸಂವಾದಗಳಲ್ಲಿ ಎರಕ ಹೊಯ್ಯುವ ಶಕ್ತಿ ಅಣ್ಣಾರಾಯರಂತಹ ಜೀವನ ವಿಮರ್ಶಕರಿಗೇನೇ ಸಾಧ್ಯ. ಈ ಕಾರ್ಯಕ್ಕೆ ರಾಯರನ್ನು ನಾನು ತುಂಬಿದ ಹೃದಯದೊಂದಿಗೆ ನೆನೆಯುತ್ತೇನೆ. ಮುನ್ನುಡಿಯಲ್ಲಿ ಪ್ರೊ. ಮುಗಳಿಯವರು ಈ ವಿಷಯಗಳನ್ನೆಲ್ಲ ಬಿಡಿಸಿ ಹೇಳಿದ್ದಾರೆ. ಅವೆಲ್ಲ ಅನುಭವದಿಂದ ಹೊರ ಹೊಮ್ಮಿ ಬಂದ ನುಡಿಗಳು.

ಅಣ್ಣಾರಾಯರಂತಹರು ಇಂಥ ಕಾದಂಬರಿಗಳನ್ನು ಬರೆಯುತ್ತಲೆ ಇರಲಿ . . . . ಸಾಹಿತ್ಯ ವಿವಿಧಮುಖವಾಗಿ ಬೆಳೆಯಲಿ.

['ಜಯಕರ್ನಾಟಕ'ದ ಕೃಪೆಯಿಂದ.]

# ಸ್ವಾತಂತ್ರ್ಯ ಹೋರಾಟದ ಚಿತ್ರ: "ರಾಷ್ಟ್ರಪುರುಷ"

ಶ್ರೀ. ಸಿ. ಎಸ್. ಮಂಗಸೂಳಿ, ಬಿ.ಎ., ಎಲ್‌ಎಲ್. ಬಿ. ಅಥಣಿ.

ಶ್ರೀ ಮಿರ್ಜಿ ಅಣ್ಣಾರಾಯರ 'ರಾಷ್ಟ್ರಪುರುಷ' ಕಾದಂಬರಿಯು ಭಾರತೀಯರ ಸ್ವಾತಂತ್ರ್ಯ ಸಂಗ್ರಾಮದ ಕಾಲು ಶತಮಾನದ ಚಿತ್ರವನ್ನು ಸುಂದರವಾಗಿ ಕೊಡುತ್ತದೆ. ಈ 'ರಾಷ್ಟ್ರಪುರುಷ, ಅದರ ಸಮಗ್ರ ದೃಷ್ಟಿ'ಯನ್ನು ವಿವರಿಸುತ್ತ 'ಸಾಹಿತ್ಯ ವಿಚಾರ'ದಲ್ಲಿ ಶ್ರೀ ವಿಚಾರಿಯವರು 'ಮೂರೂ ರಾಜಕೀಯ ಆಂದೋಲನಗಳನ್ನು ಅಳವಡಿಸಿಕೊಂಡು ವಿಸ್ತಾರವಾದ ಕಾದಂಬರಿಯನ್ನು ಬರೆಯಬೇಕೆಂಬ ಶ್ರೀ ಅಣ್ಣಾರಾಯರ ಪ್ರಯತ್ನವೇನೋ ಸರಿ. ಮೂರೂ ಆಂದೋಲನಗಳೂ ಒಂದೇ ಕಾದಂಬರಿಯಲ್ಲಿ ಬರಬೇಕೆಂಬ ಹಟದಿಂದ ಬರೆದಿರಬಹುದೆಂಬ ಸಂಶಯ ಓದುಗನ ಮನಸ್ಸಿನಲ್ಲಿ ಸುಳಿಯದಿರಲಾರದು. . . . . ಒಟ್ಟಿನಲ್ಲಿ 'ರಾಷ್ಟ್ರಪುರುಷ' ಒಂದು ದೊಡ್ಡ ಪ್ರಯತ್ನಕ್ಕೆ ಸಾಕ್ಷಿಯಾಗಿ, ರಾಜಕೀಯ ಕಾದಂಬರಿಕಾರನ ದಾರಿಯಲ್ಲಿಯ ಅಡೆತಡೆಗಳನ್ನು ಎತ್ತಿ ತೋರಿಸುವಂತಾಗುತ್ತದೆ.*—ಎಂದು ವಿಮರ್ಶಿಸುತ್ತಾರೆ. ಆದರೆ ಇಲ್ಲಿಯವರೆಗೆ ಕನ್ನಡದಲ್ಲಿ ಪ್ರಕಟವಾದ ರಾಜಕೀಯ ಕಾದಂಬರಿಗಳಲ್ಲಿ ಇದೊಂದು ವಿಶಿಷ್ಟ ದೃಷ್ಟಿಯನ್ನು ಇಟ್ಟುಕೊಂಡು ರಚಿಸಿದ ಕೃತಿಯೆಂದು ಬಹುಜನ ವಿಮರ್ಶಕರು ಹೇಳಿದ್ದಾರೆ. ಯಾಕೆಂದರೆ ರಾಜಕೀಯ ಕಾದಂಬರಿಗಳಲ್ಲಿ ಶಕ್ತಿ ಹಾಗೂ ವ್ಯಕ್ತಿಗಳೆರಡೂ ಅಷ್ಟೇ ಮುಖ್ಯವಾದವುಗಳು. ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ, ಪರಸ್ಪರ ವಿರೋಧೀ ಶಕ್ತಿಗಳ ತಿಕ್ಕಾಟದಲ್ಲಿ ಕ್ರಾಂತಿಕಾರಕ ವ್ಯಕ್ತಿಗಳು ರೂಪುಗೊಳ್ಳುತ್ತವೆ. ಅಂಥ ವ್ಯಕ್ತಿಗಳು ಹೋರಾಟದ ರೀತಿನೀತಿಗಳನ್ನೂ ಕೆಲವೊಂದು ಸಲ ಬದಲಿಸುತ್ತವೆ. ಅಂಥ ಸಂದರ್ಭದಲ್ಲಿ ಕಾದಂಬರಿಯೊಳಗಿನ ಪಾತ್ರಗಳು—ಅವುಗಳ ಜೀವನದೊಳಗಿನ ಘಟನೆಗಳು—ಶಕ್ತಿಯ ಸಂಕೇತಗಳೂ ಆಗಿ ನಿಲ್ಲುವ ಸಂಭವವುಂಟು. 'ರಾಷ್ಟ್ರಪುರುಷ' ಕಾದಂಬರಿಯ ಕೊನೆಯಲ್ಲಿ ಬರುವ ಅಜಿತ ಹಾಗೂ ಜಯತುನಬಿ ಇವರ ವಿವಾಹದ ವಿಫಲತೆಯಲ್ಲಿ ಈ ಧ್ವನಿಯು ಇದೆ. ಅಲ್ಲಿ, ಸ್ವಾತಂತ್ರ್ಯ ಪೂರ್ವ

---

* ಧಾರವಾಡದ 'ಜಯಂತಿ' ಮಾಸಪತ್ರಿಕೆಯ ನವ್ಹೆಂಬರ ೧೯೫೭ನೆಯ ಇಸ್ವಿಯ ಸಂಚಿಕೆಯಲ್ಲಿ ಪ್ರೊ. ವ್ಹಿ. ಎಮ್. ಇನಾಮದಾರ ಎಂ. ಎ. ಇವರು ಮಾಡಿದ 'ರಾಜಕೀಯ ಕಾದಂಬರಿಗಳು' ಎಂಬ ಸಮಾಲೋಚನೆಯಿಂದ.

ದಲ್ಲಿಯೇ, ಭಾರತದ ನೆಲಜನಗಳು ಎರಡು ಹೋಳಾಗುವವೆಂಬ ಭವಿಷ್ಯವನ್ನು ಲೇಖಕರು ಸೂಚಿಸಿದ್ದಾರೆ. 'ರಾಷ್ಟ್ರಪುರುಷ' ಕಾದಂಬರಿಯ ಇಂಥ ಒಳ್ಳೆಯ ಮುಕ್ತಾಯವನ್ನು ಕರ್ನಾಟಕದ ಸುಪ್ರಸಿದ್ಧ ವಿಮರ್ಶಕರಾದ ಪ್ರೊ. ವ್ಹಿ. ಸೀತಾರಾಮಯ್ಯನವರು ಬಾಯಿತುಂಬ ಹೊಗಳಿದ್ದಾರೆ, ಸ್ವಾಗತಿಸಿದ್ದಾರೆ.* ಹಿಂದೂಮುಸ್ಲಿಮ ಸಮಸ್ಯೆಯು ರಾಷ್ಟ್ರದ ಭವಿಷ್ಯತ್ತಿನ ಜೀವನದಲ್ಲಿ ಹೇಗೆ ಬಿಡಿಸಲ್ಪಡಬಹುದೆಂಬುದರ ಸಂಕೇತವನ್ನು ಕ್ರಿ. ಶ. ೧೯೪೫ರಲ್ಲಿಯೇ ವಿರ್ಜಿಯವರು ಈ ಕಾದಂಬರಿಯಲ್ಲಿ ಕಲಾತ್ಮಕವಾಗಿ ನೀಡಿದ್ದಾರೆ.

ಬೆಂಗಳೂರಿನ 'ದೇಶಬಂಧು' ಸಾಪ್ತಾಹಿಕದ ಸಾಹಿತ್ಯ ಸಮೀಕ್ಷಕರಾದ ಶ್ರೀ 'ಕಂಡಾಡಿ'ಯವರು 'ರಾಷ್ಟ್ರಪುರುಷ'ವನ್ನು ಹೀಗೆ ವಿಮರ್ಶಿಸಿದ್ದಾರೆ:— ತಮ್ಮ 'ನಿಸರ್ಗ' ಕಾದಂಬರಿಯಿಂದ ಕನ್ನಡ ವಾಚಕಲೋಕದ ಅಚ್ಚುಮೆಚ್ಚಿನ ಲೇಖಕರೂ ತಮ್ಮ 'ಲೇಖನ ಕಲೆ'ಯಿಂದ ಕನ್ನಡ ಸಾಹಿತ್ಯದ ವಿವಿಧ ತಂತ್ರಗಳ ಮೇಲೆ ತನಿಬೆಳಕು ಚೆಲ್ಲಿದವರೂ ಆದ ಅಣ್ಣಾರಾಯರ ೭೨೦ ಪುಟಗಳ ನೀಳ ಕಾದಂಬರಿ 'ರಾಷ್ಟ್ರಪುರುಷ' ಓದಿದೆ.

ರಾಷ್ಟ್ರಪುರುಷ ಭಾರತದ ಕಳೆದ ಇಪ್ಪತ್ತೈದ ವರ್ಷಗಳ ಕತೆ. ಕಾಲು ಶತಮಾನಕಾಲದಲ್ಲಿ ವಿದ್ಯುದ್ವೇಗದಲ್ಲಿ ಆಗಿಹೋದ ನೂರು ಘಟನೆಗಳ ಮನೋಹರವಾದ ಹೆಣಿಕೆ. ಪುಟ್ಟಪ್ಪನವರ 'ಕಾನೂರು ಸುಬ್ಬಮ್ಮ'ನಂತೆ, ಗೋಕಾಕರ 'ಇಜ್ಜೋಡು'ವಿನಂತೆ, ಕಾರಂತರ 'ಮರಳಿ ಮಣ್ಣಿಗೆ'ಯಂತೆ ರಾಷ್ಟ್ರಪುರುಷನಾದರೂ ನಮ್ಮ ನಾಡಿನ ಒಂದು ಭಾಗದ ಜನಜೀವನದ ಇತಿಹಾಸ . . . ಒಂದು ರೀತಿಯಲ್ಲಿ ರಾಷ್ಟ್ರಪುರುಷ ಇವುಗಳನ್ನೆಲ್ಲ ಹೋಲುತ್ತದೆ. ಇನ್ನೊಂದು ರೀತಿಯಲ್ಲಿ ಭಿನ್ನ. ಉತ್ತರ ಕರ್ನಾಟಕದ ಸಿದ್ಧಾಪುರವೆಂಬ ಹಳ್ಳಿಯ ಜೈನಸಂಸಾರವೊಂದರಲ್ಲಿ ಮೂಡಿದ ಮಾನವ ಕುಸುಮ ಸುತ್ತಣ ಸ್ವಾತಂತ್ರ್ಯ ಹೋರಾಟದ ವಾತಾವರಣದಲ್ಲಿ ಅರಳಿದ ಕಥೆಯಿದೆ. ಉಳಿದೆಲ್ಲ ಕಾದಂಬರಿ

---

* "Hindu-Moslem brotherhood is truly felt by the writer as part of the fulfilment of national struggle for independence and survival—and a main plank in the Gandhian Scheme. Ajit, true idealist that he was, feels like compassing that also in his stride. But like the problem, the marriage is left over. Both are unfinished tasks".

—*The Indian P. E. N. April 1948.*

ಗಳಂತೆ—ಸಾರ್ಥಕ ಕಾದಂಬರಿ ಇರಬೇಕಾದಂತೆ—ಇದೂ ಜನಜೀವನದ ಬಿಂಬಗ್ರಾಹಕವಾಗಿದೆ. ಆದರೆ ಹೀಗೆ ಹಿಡಿದ ಈ ಚಿತ್ರ ಪ್ರತಿಚಿತ್ರವಾಗಿಲ್ಲ, ಸಜೀವ ಚಿತ್ರವಾಗಿದೆ.

ಒಂದು ಜನತೆಯ ಆಶೆ-ನಿರಾಶೆ, ಉದ್ವೇಗ-ಆಕ್ರೋಶ, ಆಗು-ಹೋಗು, ಬಾಳುವೆ-ಹೋಳುವೆಗಳನ್ನು ಕುರಿತ ಕೃತಿಯೇ ಸಾರ್ಥಕ ಕಾದಂಬರಿಯೆನ್ನಬಹುದಾದರೆ, 'ರಾಷ್ಟ್ರಪುರುಷ' ಒಂದು ಒಳ್ಳೆಯ ಕಾದಂಬರಿ.

೧೯೨೦ರ ಸುಮಾರಿಗೆ ಈ ಕಾದಂಬರಿಯ ಕಥೆಯ ಆರಂಭ. ೧೯೪೪ರ ಸುಮಾರಿಗೆ ಮುಗಿತಾಯ; ಮುಗಿತಾಯವೆಂದರೆ ಅಲ್ಲಿ ಕಥೆ ಸಂಪೂರ್ಣವಾಗಿಲ್ಲ. ಅಲ್ಲಿಗೆ ಒಂದು ಘಟ್ಟ. ಸುಮಾರು ಈ ಇಪ್ಪತ್ತೈದು ವರ್ಷದಲ್ಲಿ ಭಾರತದಲ್ಲಿ—ಹಾಗೂ ಕರ್ನಾಟಕದಲ್ಲಿ—ನಡೆದ ಸ್ವಾತಂತ್ರ್ಯಯುದ್ಧದ ಕಥೆಯ ಪರಿಯೆಂತು? ೧೯೨೦ರ ಸುಮಾರಿಗೆ ಹತ್ತು ಹನ್ನೆರಡು ವರ್ಷದವನಿದ್ದ ಹುಡುಗ ಮುಂದಣ ೨೫ ವರ್ಷಗಳಲ್ಲಿ ದೇಶದಲ್ಲಿ ಏನೇನು ಕಂಡ? ಏನೇನು ಉಂಡ? ಅವನ ವಿಚಾರಮಾರ್ಗದಲ್ಲಿ ಹಾದು ಹೋದ ವೃತ್ತಿ-ಪ್ರವೃತ್ತಿಗಳೆಂಥವು? ಇವನ ಸಮಕಾಲಿಕ ಸಮಾಜ, ತನ್ನ ಮಕ್ಕಳನ್ನು ನಾಡಿನ ಬಿಡುಗಡೆಗಾಗಿ ಧಾರೆಯೆರೆದ ಪರಿಯೆಂತು?—ಇವನ್ನೆಲ್ಲ ವರ್ಣಿಸುವ ಸುಂದರ ಕಾದಂಬರಿ, "ರಾಷ್ಟ್ರಪುರುಷ".

ಸಿದ್ದಾಪುರ ಉತ್ತರ ಕರ್ನಾಟಕದ ಒಂದು ಊರು. ಆದಗೌಡ ಅಲ್ಲಿಯ ಗೌಡ. ಅವನ ತೀರಿಹೋದ ತಮ್ಮನ ಮಗ ಅಜಿತ. ಅವನ ಅಕ್ಕ ಇಂದಿರೆ. ತಾಯಿ ಸರಸ್ವತಿ. ಆದಗೌಡನ ಮಗ ರಾವಸಾಹೇಬ ಅಜಿತನಗಿಂತ ಸ್ವಲ್ಪ ಕಿರಿಯ. ಆದಗೌಡನ ಹೆಂಡತಿ ಗಂಗವ್ವ. ತಾಯಿ ಮರುದೇವಿ–ಜೈನಸಂಸಾರ.

೧೯೨೦ರ ಸುಮಾರಿನಲ್ಲಿ ಅಜಿತನಿಗೆ ಹತ್ತು-ಹನ್ನೆರಡು ವಯಸ್ಸಿರಬಹುದು. ಆಗಲೇ ಅವನಿಗೆ ಬಿಂಗರಿ ತಿರುಗಿಸಿ ದಾರ ತೆಗೆಯುವುದರಲ್ಲಿ ಆಸಕ್ತಿ. ಆದರೆ ಕಕ್ಕ ಆದಗೌಡ ಸಾಮ್ರಾಜ್ಯದ ನಚ್ಚಿನ ಸೇವಕ. ತನಗಂತೂ 'ರಾವಸಾಹೇಬ' ಬಿರುದು ಬರಲಿಲ್ಲ. ತನ್ನ ಮಗನಿಗಾದರೂ ಆ ಬಿರುದು ಬರಲಿ ಎಂದು ಅವನಿಗೆ 'ರಾವಸಾಹೇಬ' ಎಂತಲೇ ನಾಮಕರಣ ಮಾಡಿದ ಪ್ರಭೃತಿ! ಇನ್ನು ಅಜಿತನಿಗೂ ಅವನಿಗೂ ಘರ್ಷಣೆ ತಪ್ಪುವುದೆ? ಚಿಕ್ಕ ಹುಡುಗ ಅಜಿತ ಬಿಂಗರಿ ತಿರುಗಿಸಿ ಆನಂದ ಸವಿಯುತ್ತಿದ್ದಾಗ, ತಮ್ಮ ರಾವಸಾಹೇಬ ಚಪ್ಪಾಳೆಯಿಕ್ಕುತ್ತಿದ್ದಾಗ, ಕಕ್ಕ ಆದಗೌಡ ಬಂದು ಕೋಪದಿಂದ ಅಜಿತನ ತಲೆಗೇ ಹೊಡೆಯಲು ಹೋಗಬೇಕೆ? ಆದರೆ ಆ ದೊಣ್ಣೆಯ ಪೆಟ್ಟು ಅಜಿತನಿಗೆ

ತಾಕಲಿಲ್ಲ. ಗೋಡೆಗೆ ತಗುಲಿಸಿದ್ದ ಪಂಚಮ ಜಾರ್ಜರ ಪಟಕ್ಕೆ ಬಡಿದು, ಅದು ಕೆಳಗೆ ಬಿತ್ತು.

ಹೀಗೆ ಅಜಿತ-ಆದಗೌಡರಲ್ಲಿ ವಿರಸ ಪ್ರಾರಂಭವಾದ ಕಥೆ ಉದ್ದಕ್ಕೂ ಹೀಗೆಯೇ ಸಾಗುತ್ತದೆ. ಅಜಿತ ಮುಂದೆ ಶಾಲೆಯ ಮುಷ್ಕರದಲ್ಲೆಲ್ಲ ಭಾಗ ವಹಿಸತೊಡಗಿದ. ಆಗಲೇ ಅವನ ಮನೋ-ವಿಕಾಸವಾಗತೊಡಗಿತ್ತು. ಸ್ವಾತಂತ್ರ್ಯಯುದ್ಧದ ಕಹಳೆಯ ಕೂಗು ಅವನಿಗೆ ಕೇಳಿಸಿತ್ತು. ಅವನನ್ನು ಈ ಕೆಲಸದಲ್ಲಿ ತಯಾರಿಸಿದವರು ಜಾಧವ ಮಾಸ್ತರರು. ಮುಂದೆ ಅಜಿತ ಹೈಸ್ಕೂಲು ಮುಗಿಸಿ, ಮುಂದಿನ ವಿದ್ಯಾಭ್ಯಾಸಕ್ಕೆಂದು ಮುಂಬಯಿಗೆ ಹೋದ. ತಮ್ಮನಾದ ರಾವಸಾಹೇಬ ಶಾಲೆಯಲ್ಲಿ ಗೋತ ಹೊಡೆಯುತ್ತಲೇ ಇದ್ದ.

ಮುಂಬಯಿಯಲ್ಲಿ ಅಜಿತನಿಗೆ ಅಕ್ಕ ಇಂದಿರೆ, ಭಾವ ಸುಧೀರರ ಸಹ ಯೋಗ ಲಭಿಸಿತು. ಸುಧೀರನೊಬ್ಬ ಸಮಾಜವಾದಿ. ಅವನು ಕೆಲಸಕ್ಕಿದ್ದದ್ದು ಒಂದು ಗಿರಣಿಯಲ್ಲಿ; ಆದರೆ 'ಲೈಟ್' ಎಂಬ ಕ್ರಾಂತಿಕಾರಕ ಪತ್ರಿಕೆಯ ಕೆಲಸಗಾರರಲ್ಲಿ ಅವನೂ ಒಬ್ಬ. ಕೂಲಿಗಾರರ ಸಂಘಟನೆಗೆ ಅವನೂ ಕಾರಣಪುರುಷ.

ಅಜಿತನಿಗೆ ಈ 'ಲೈಟ್' ಪತ್ರಿಕೆಯ ಪರಿಚಯವೂ ಆಯಿತು. ಜತೆ-ಜತೆಯಲ್ಲಿ ಸಮಾಜವಾದ–ಗಾಂಧಿವಾದಗಳ ಪರಸ್ಪರ ತುಲನೆಯೂ ಆಯಿತು. ಕಾಲೇಜಿನಲ್ಲೂ ಒಂದು 'ಸ್ಟಡಿಸರ್ಕಲ'ನ ಸ್ಥಾಪನೆಯಾಗಿ ಅಲ್ಲೂ ಕ್ರಾಂತಿಕಾರಿ ಭಾವನೆಗಳ ವಿಚಾರ ಸುಳಿಯಿತು.

ಭಂಡವಲದಾರರ ವಿರುದ್ಧಕಾರ್ಯಕ್ಕಾಗಿ ಸುಧೀರನಿಗೆ ಸೆರೆಮನೆಯ ವಾಸ ಲಭಿಸಿತು. ಈಚೀಚೆಗೆ ಅಜಿತನೂ 'ಲೈಟ್' ಪತ್ರಿಕೆಯಲ್ಲಿ ಖಾರವಾಗಿ ಬರೆಯುತ್ತಿದ್ದುದರಿಂದ ಆ ಪತ್ರಿಕೆಗೂ ತಲೆನೋವು ಬಂತು. ಅಜಿತನೂ ಅವನ ಕ್ರಾಂತಿಕಾರಕ ಸಂಘಕ್ಕಾಗಿ ಕಾಲೇಜಿನಿಂದ ಹೊರಗಾದ. ಅವನು ಲೈಬ್ರರಿಯಿಂದ ತಂದಿದ್ದ ಪುಸ್ತಕಗಳೇ ಪೋಲೀಸರ ದೃಷ್ಟಿಯಿಂದ ಆಕ್ಷೇಪಕರ ವಾಗಿದ್ದುವು!

ಮುಂದೆ ಅಜಿತನಿಗೆ ನಿಲ್ಲಲು ನೆಲೆಯಿಲ್ಲವಾಯಿತು. ಒಂದು ದಿನ ಬೀದಿಯಲ್ಲಿ ಹೋಗುತ್ತಿದ್ದಾಗ, ಭೀಕರ ಹಿಂದೂಮುಸ್ಲಿಂ ಹೊಡೆದಾಟ ವಾಯಿತು. ಇದರ ನಡುವೆ ಒಂದು ಸಣ್ಣ ಹುಡುಗಿಯೊಡನೆ ಮುದುಕಿ ಯೊಬ್ಬಳು ಸಿಕ್ಕಿಬಿದ್ದಳು. ಮುದುಕಿ ಹಿಂದೂ, ಹುಡುಗಿ ಮುಸ್ಲಿಂ! ಮುದುಕಿ

ದೊಂಬಿಯಲ್ಲಿ ಸತ್ತಳು. ಹುಡುಗಿ ಪಾರಾದಳು. ಅಜಿತ ಆಸ್ಪತ್ರೆ ಸೇರಿದ್ದ. ಆ ಹುಡುಗಿಯೇ ಜಯತುನಬಿ. ಆಕೆಯ ತಾಯಿ ಹಿಂದೂ. ಸಮಾಜದ ಕ್ರೌರ್ಯದಿಂದ ಸೆರೆಕುಡುಕ ಮುಸ್ಲಿಮನೊಬ್ಬನ ಅನುವರ್ತಿಯಾಗಿದ್ದಳು.

ತಮ್ಮನ ಮದುವೆಗೆಂದು ಭಾವನೊಡನೆ ಊರಿಗೆ ಬಂದ ಅಜಿತ ತಾನೂ ಮಂಗಳಸೂತ್ರದ ಕಟ್ಟಿಗೆ ಸಿಲುಕಿದ. ಆತನ ಹೆಂಡತಿ ಗುಣವಂತಿ ಗುಣ ವಂತಿಯೇ.

ಮುಂದೆ ಸತ್ಯಾಗ್ರಹ ಚಳುವಳಿ ಮತ್ತೆ ಪ್ರಾರಂಭ. ಅಜಿತ ಊರಿನಲ್ಲಿ ಹೋರಾಟ ಹೂಡಿ, ಜನರಲ್ಲಿ ಸ್ವಾತಂತ್ರ್ಯದ ಹಂಬಲ ಬಿತ್ತಿ, ಪೋಲೀಸರಿಗೆ ಸಿಕ್ಕದೆ ಕಣ್ಮರೆಯಾದ. ಮರೆಯಲ್ಲಿದ್ದು ಕೆಲಸ ಮಾಡತೊಡಗಿದ. ಇದರಿಂದ ಆದಗೌಡನಿಗೆ ಸೆರೆಮನೆವಾಸದ ಸೌಭಾಗ್ಯ ಲಭಿಸಿತು. ಅಜಿತನ ಆಸ್ತಿ ಜಪ್ತಾಯಿತು. ಅಜ್ಜಿ ಮರುದೇವಿ ಕೊರಗಿನಲ್ಲಿಯೇ ಕಣ್ಣುಮುಚ್ಚಿದಳು. ಸಾಯುವ ಕಾಲಕ್ಕೆ ಅವಳನ್ನು ಕಾಣಲು ಬಂದ ಅಜಿತನೂ ಆಳರಸರ ಬಂದಿಯಾದ. ರಾವಸಾಹೇಬನ ಕಾಮದ ದೃಷ್ಟಿಗೆ ಸಿಲುಕಿದ ಗುಣವಂತಿ ಬಾವಿ ಹಾರಿಕೊಂಡಳು!

ಕೊನೆಗೆ ಕಾಂಗ್ರೆಸ್ಸಿಗೆ ಪ್ರಾಂತ ಸ್ವರಾಜ್ಯ ಲಭಿಸಿದಾಗ ಅಜಿತನ ಬಿಡುಗಡೆ ಯಾಯಿತು. ಜಪ್ತಾಗಿದ್ದ ಹೊಲಮನೆ ಅವನಿಗೆ ಹಿಂದಕ್ಕೆ ಲಭಿಸಿತು. ತಾಯಿ–ಮಗ ಸ್ವಲ್ಪ ಕಾಲ ಸುಖವಾಗಿದ್ದರು. ಆದರೆ ಗುಣವಂತಿಯ ನೆನವು ಆಗಾಗ ಕಣ್ಣು ತೋಯಿಸುತ್ತಿತ್ತು.

ಅಷ್ಟರಲ್ಲಿ ಮಹಾಯುದ್ಧ ಬಂತು. ೧೯೪೨ರ ಸ್ವಾತಂತ್ರ್ಯಯುದ್ಧವೂ ಬಂತು. ಆಗ ಕಾಂಗ್ರೆಸ್ ಅಧಿವೇಶನ ನೋಡಲೆಂದು, ಮುಂಬಯಿಗೆ ಹೋದ ಅಜಿತ, ಮುಖಂಡರ ಬಂಧನದ ಪರಿಣಾಮವಾದ ಉನ್ಮಾದದ ಸಾಗರದ ತೆಕ್ಕೆಗೆ ಸಿಲುಕಿದ. ದರೋಡೆಯ ಅಪವಾದದ ಮೇಲೆ ಇವನ ಸೆರೆಯಾಯಿತು.

ಜೈಲಿನಲ್ಲಿ ಗುಟ್ಟು ಹೊರಡಿಸಲು ಪೋಲೀಸರು ಇವನನ್ನು ಹೊಡೆದರು. ಅದರ ಪರಿಣಾಮವಾಗಿ ಇವನಿಗೆ ಪ್ರಜ್ಞೆತಪ್ಪಿತು. ಇವನು ಸತ್ತನೆಂದು ಹೆದರಿದ ಪೋಲೀಸರು, ಇವನು ತಪ್ಪಿಸಿಕೊಂಡ ಸುದ್ದಿ ಹುಟ್ಟಿಸಿ ಕಸದ ತೊಟ್ಟಿಯ ಬಳಿ ಹಾಕಿದರು. ಅವನ ದೇಹ ಪಾಕಿಸ್ತಾನವಾದಿ ಮೌಲವಿಗಳಿಗೆ ದೊರಕಬೇಕೆ? ಅಲ್ಲಿ ತರುಣಿಯೊಬ್ಬಳ ಆರೈಕೆಯಿಂದ ಬದುಕಿದ. ಆ ತರು ಣಿಯೇ ಜಯತುನಬಿ!

ಮತ್ತೆ ಅಲ್ಲಿಂದ ಅಜಿತ ಜಯತುನಬಿಯೊಡನೆ ಹೊರಬಿದ್ದ. ಸಿದ್ದಾಪುರದಲ್ಲಿ ಮತ್ತೆ ಗುಪ್ತ ಹೋರಾಟ. ಕೊನೆಗೆ ಗಾಂಧೀಜಿಯವರ ಬಿಡುಗಡೆ. ಜಯತುನಬಿಯೊಡನೆ ವಿವಾಹ ನಿಶ್ಚಯ. ಆದರೆ ಕೊನೆಯ ಗಳಿಗೆಯಲ್ಲಿ ಜಯತುನಬಿಯನ್ನು ಅವನಿಂದ ತಪ್ಪಿಸಲು, ಮೌಲವಿ ಒಂದು ಉಪಾಯ ಹೂಡಿದ. ಅದರಿಂದ ಅವಳ ಭವಿಷ್ಯವೇನಾಯಿತು? ಅಜಿತ-ಜಯತುನಬಿಯವರ ವಿವಾಹ ನಡೆಯಿತೆ?—ಎನ್ನುವುದು ಪ್ರಶ್ನೆಯಾಗಿಯೇ ಉಳಿಯುತ್ತದೆ.

* * * * * *

ಹೀಗೆ ಒಂದು ವಿಸ್ತಾರವಾದ ಕಥಾವಸ್ತುವಿನ ಮೇಲೆ, ಒಂದು ಇಡೀ ಜನಪದದ ಹೋರಾಟದ ಸಾಮಗ್ರಿಯ ಸಹಾಯದಿಂದ ರಚಿತವಾದ ಈ ಕಾದಂಬರಿ ನಿಜಕ್ಕೂ ಕನ್ನಡಕಾದಂಬರಿಗೊಂದು ಹೊಸಹಾದಿ ಹಾಕಿ ಕೊಟ್ಟಿದೆ.

ಅಜಿತನ ನೂರೆಂಟು ವಿಚಾರಧಾರೆ ನಾಡಿನಲ್ಲಿ ಈ ಕಾಲು ಶತಮಾನದಲ್ಲಿ ಮಿಂಚಿ ಮರೆಯಾದ, ಸುಳಿದು ನುಸುಳಿಕೊಂಡ ನೂರೆಂಟು ರಾಜಕೀಯ ವಿಚಾರಗಳ ವ್ಯಾಖ್ಯಾನರೂಪವಾಗಿದೆ. ಸಾವರಕರರ ಹಿಂದೂ ಮಹಾಸಭೆಯಿಂದ ಜಿನ್ನರ ಪಾಕಿಸ್ತಾನ ಪ್ರಶ್ನೆಯ ವರೆಗೆ, ಕಮ್ಯುನಿಜಂ, ರಾಯಿಸಂ ಮುಂತಾದ ಎಲ್ಲ ವಿಚಾರಮಾರ್ಗಗಳೂ ಬಂದುಹೋಗಿವೆ. ನೇತಾಜಿ ಬೋಸರ ಅಜಾದ್ ಹಿಂದ್ ಫೌಜಿನ ಮಾತಾದರೂ ಬರದೆ ಹೋಗಿಲ್ಲ. ಇಂತಿಗಿ ಇದೊಂದು ರಾಜಕೀಯ ಸಂಪುಟ. ಆದರೆ ಎಲ್ಲೂ ಕಥನಕಲೆಯ ಒಪ್ಪ ಹೆಚ್ಚಾಗಿ ಕೆಟ್ಟಿಲ್ಲ. ಮಾನವೀಯತೆಯ ದೃಷ್ಟಿ ಮರೆಯಾಗಿಲ್ಲ. ಇದು ಅಣ್ಣಾರಾಯರ ಹೃದಯವಂತಿಕೆಯ ಪ್ರಭಾವ.*

* * * * * *

ಇಲ್ಲಿ ಅಜಿತನನ್ನು ಹೊಡೆಯಲು, ಆದಗೌಡನು ಎತ್ತಿದ ಬಡಿಗೆ ಪಂಚಮ ಜಾರ್ಜರ ಭಾವಚಿತ್ರಕ್ಕೆ ಬಡಿದು, ಅದು ಕೆಳಗೆ ಬೀಳುತ್ತದೆ. ಇಲ್ಲಿ ಬ್ರಿಟಿಷ ಸಾಮ್ರಾಜ್ಯದ ಅಳಿಗಾಲದ ಧ್ವನಿಯಿದೆ. ಹಿಂದೂ ಮುದುಕಿಯ ಮಗ್ಗುಲ ಕೂಸಾದ ಜಯತುನಬಿ ಬಾಳಿ ಬೆಳೆಯುವುದು, ಹಿಂದುಸ್ತಾನ ಪಾಕಿಸ್ತಾನಗಳ ಪ್ರತೀಕವಾಗಿದೆ. ಇಂಥ ಜನಾಂಗದ ರಾಜಕೀಯ ಶಕ್ತಿಗಳ ಕ್ರಿಯೆ ಪ್ರತಿಕ್ರಿಯೆಗಳನ್ನು ಧ್ವನಿಯ ಮೂಲಕ ಕಾದಂಬರಿಯುದ್ದಕ್ಕೂ ವ್ಯಕ್ತ

* ದೇಶಬಂಧು ೧೨-೧೦-೧೯೪೭ ಇಸ್ವಿಯ ಸಂಚಿಕೆ.

ಪಡಿಸಿದ್ದಾರೆ. ಆದರೂ ಇದು ಶಕ್ತಿಪ್ರಧಾನ ಕಾದಂಬರಿಯೆನಿಸದು. ವ್ಯಕ್ತಿ ಪ್ರಧಾನ ಕಾದಂಬರಿಗಳ ಮಾಲಿಕೆಯಲ್ಲಿಯೇ ನಿಲ್ಲುವುದು. ಆ ವ್ಯಕ್ತಿಗಳನ್ನು ರಾಷ್ಟ್ರದ ಶಕ್ತಿಗಳು ಪ್ರಚೋದಿಸಿದ ಸೂಕ್ಷ್ಮ ಅಂಶಗಳನ್ನು ಮಾತ್ರ ಇದರಲ್ಲಿ ಕಾಣಬಹುದಾಗಿದೆ.

ಶ್ರೀ ಪಾಟೀಲ ಶಂಕರರು ಈ ಕಾದಂಬರಿಯನ್ನು ವಿಮರ್ಶಿಸುತ್ತ 'ವಾಹಿನಿ'ಯಲ್ಲಿ *ಹೀಗೆ ವಿವರಿಸಿದ್ದಾರೆ:—'ವ್ಯಕ್ತಿ ಕಾದಂಬರಿ'ಯಾಗಿ ಗ್ರಹಿಸಿ ವಿಮರ್ಶಿಸಿದಾಗ 'ರಾಷ್ಟ್ರಪುರುಷ' ಕನ್ನಡದ ಒಳ್ಳೇ ಕಾದಂಬರಿಗಳ ಮಾಲಿಕೆ ಯಲ್ಲಿ ಸೇರಲು ಅರ್ಹವಾದುದು ಎಂದು ನಿಸ್ಸಂಕೋಚವಾಗಿ ಹೇಳಬಹುದು. ಪಾತ್ರ ರಚನೆಯಲ್ಲಿ ಲೇಖಕರು ಅಪ್ರತಿಮ ಕೌಶಲವನ್ನೂ, ಮಾನವನ ಅಂತ ರಂಗದ ಅರಿವನ್ನೂ ತೋರ್ಪಡಿಸಿದ್ದಾರೆ. ಆದರ್ಶ ಸಾಧನೆಗಾಗಿ ಹಾತೊರೆ ಯುವ ಅಜಿತ, ದರ್ಪವೇ ಮೂರ್ತಿಮತ್ತಾದ ಆದಗೌಡರು, ವಾತ್ಸಲ್ಯಮಯಿ ಅಜ್ಜಿ ಮರುದೇವಿ, ಕಷ್ಟಸಹಿಷ್ಣು ಸರಸ್ವತಿ, ಹೆಸರಿಗೆ ತಕ್ಕಂತೆ ಇರುವ ಗುಣವತಿ, ಕಾಮತೃಷೆಪೇದಿತ ರಾವಸಾಹೇಬ, ಎಲ್ಲರೂ ನಿತ್ಯಜೀವನದ ಸಜೀವ ವ್ಯಕ್ತಿಗಳು. ಯಾವುದರಲ್ಲಿಯೂ ಕೃತ್ರಿಮತೆಯಿಲ್ಲ. ಈ ಕಾದಂಬ ರಿಯ ಇನ್ನೊಂದು ಹೆಚ್ಚಳವೆಂದರೆ, ಪ್ರತಿಯೊಂದು ಪಾತ್ರದ ಮಾನಸಿಕ ವ್ಯಾಪಾರದ ನೈಜ ಚಿತ್ರಣ. ಲೇಖಕರು ವ್ಯಕ್ತಿಯ ಮನಸ್ಸನ್ನು ಒಳಹೊಕ್ಕು ಅಲ್ಲಿ ನಡೆಯುವ ವಿಚಿತ್ರ ವ್ಯಾಪಾರ, ವಿಚಾರಗಳ, ಭಾವಗಳ, ಕಲ್ಪನೆಗಳ ತಿಕ್ಕಾಟ, ಹೋರಾಟ, ಎಲ್ಲವನ್ನೂ ಹೊರಗೆಡಹಿದ್ದಾರೆ. ಆದರ್ಶವಾದಿ ಯೆಂದರೆ ಸಂಪೂರ್ಣ ದೋಷರಹಿತ ಆದರ್ಶವಾದಿ, ನೀಚವೆಂದರೆ ಸಂಪೂರ್ಣ ನೀಚ ಹೀಗೆ ನೈಜ ಜೀವನದಲ್ಲಿ ಯಾರೂ ಇರುವದಿಲ್ಲ. ನಮ್ಮ ಸಹಜ ವೃತ್ತಿಗೂ, ನಮ್ಮ ಅಂತರಾತ್ಮನಿಗೂ ಯಾವಾಗಲೂ ಹೋರಾಟ ನಡೆದೇ ಇರುತ್ತದೆ. ಆ ಸೂಕ್ಷ್ಮತಮ ಹೋರಾಟವನ್ನು ಲೇಖಕರು ಚಿತ್ರಿಸಲು ಪ್ರಯತ್ನಿಸಿದ್ದಾರೆ. ಸಂಪೂರ್ಣವಲ್ಲದಿದ್ದರೂ ಕೆಲಮಟ್ಟಿಗಾದರೂ ಅದನ್ನು ಸಾಧಿಸಿದ್ದಾರೆ. ಉಳಿದ ಕಾದಂಬರಿಗಳಲ್ಲಿದ್ದಂತೆ ಇಲ್ಲಿ ಆದರ್ಶದ ಹುಚ್ಚು ಹೊಳೆ ಹರಿದಿಲ್ಲ. ಅಜಿತ ಆದರ್ಶವಾದಿ ನಿಜ. ಆದರೆ ಅವನು ಮನುಷ್ಯನೂ ಹೌದು. ಅವನಲ್ಲಿಯೂ ಬೇರೆ ಬೇರೆ ಪ್ರವೃತ್ತಿಗಳ ಹೋರಾಟ ನಡೆದೇ ಇರುತ್ತದೆ. ಯಾವ ಕಾರ್ಯವನ್ನೇ ಮಾಡಲೆಸಗಲಿ, ಆಗ ಅವನ ಮನಸ್ಸು

*'ವಾಹಿನಿ' ಸಾಪ್ತಾಹಿಕ, ಸಪ್ಟೆಂಬರ ೧, ೧೯೪೭ನೆಯ ಇಸ್ವಿ.

ತೂಗುಯ್ಯಾಲೆಯಾಡುತ್ತಿರುತ್ತದೆ. ಅದನ್ನು ಮೀರಿ ಆತ ಕಾರ್ಯವೆಸಗುತ್ತಾನೆ. ಎಲ್ಲ ಪಾತ್ರಗಳಲ್ಲಿಯೂ ಈ ಮನೋವ್ಯಾಪಾರವನ್ನು ಚಿತ್ರಿಸಿದ್ದಾರೆ ಲೇಖಕರು. ಸರ್ವಸಾಮಾನ್ಯವಾಗಿ ಎಲ್ಲ ಕಾದಂಬರಿಗಳಲ್ಲಿ ಬರುವ ಅಸಹಜ, ಅಪಕ್ವ ಪ್ರಣಯದ ಹುಚ್ಚಾಟ ಈ ಕಾದಂಬರಿಯಲ್ಲಿ ಇಲ್ಲದಿರುವುದು ಇನ್ನೊಂದು ಹೆಚ್ಚಳ. ಅದಕ್ಕಾಗಿ ಅಣ್ಣಾರಾಯರು ಅಭಿನಂದನೀಯರು.

ಈ ಕಾದಂಬರಿಯ ಅಜಿತ ನಿಜವಾಗಿಯೂ ರಾಷ್ಟ್ರಜೀವಿ. ಇಲ್ಲಿಯ ಕಥೆಯ ಹರವು ಕಾದಂಬರಿಗೆ ರಾಷ್ಟ್ರೀಯ ಸ್ವರೂಪವನ್ನು ತಂದುಕೊಟ್ಟಿದೆ. ಇದನ್ನೆಲ್ಲ ಅವಲೋಕಿಸಿ ವಿಮರ್ಶಕರು 'ರಾಷ್ಟ್ರಪುರುಷ'ವನ್ನು ಕುರಿತು ಹೀಗೆ ಉದ್ಗಾರ ತೆಗೆದಿದ್ದಾರೆ:—"ಇಲ್ಲಿ ಬರುವ ವಿಷಯವಿಸ್ತಾರವನ್ನು ನೋಡಿದರೆ ಲೇಖಕರು 'ಏನನ್ನು ಬಿಟ್ಟಿದ್ದಾರೆ?'—ಎನ್ನಿಸುವುದು. ಅವರು ಇದನ್ನು ಬರೆಯುವಲ್ಲಿ ಅದೆಷ್ಟು ತಾಳ್ಮೆವಹಿಸಿದ್ದಾರೆನ್ನುವುದೇ ಅವರ ಮಹಾಸಾಹಸ. ಅವರ ಈ ಗುಣದಿಂದ ನಾವಿನ್ನೂ ಅವರಿಂದ ಅನೇಕ ಕೃತಿಗಳನ್ನು ಕಾಣುವ ಯೋಗವಿದೆ."* ವಿಮರ್ಶಕರ ಈ ಅಪೇಕ್ಷೆಯನ್ನು ಇಲ್ಲಿಯ ವರೆಗೂ ಅಣ್ಣಾರಾಯರು ಪೂರೈಸುತ್ತ ಬಂದುದನ್ನು ಅವರ ಮುಂದಿನ ಸಾಹಿತ್ಯಕೃತಿಗಳನ್ನು ಅವಲೋಕಿಸಿದ ಯಾರೂ ಹೇಳಬಹುದಾಗಿದೆ.

---

* ಶ್ರೀ ದತ್ತಾತ್ರೇಯ ಕುಲಕರ್ಣಿ ಇವರು ಮೈಸೂರಿನ 'ಪುಸ್ತಕ ಪ್ರಪಂಚ' ಪತ್ರಿಕೆಯ ಸಂಪುಟ ೨; ಸಂಚಿಕೆ ೬ರಲ್ಲಿ ಮಾಡಿದ ವಿವರ್ಶೆಯಿಂದ.

# ಅಣ್ಣಾರಾಯರ 'ಅಶೋಕ ಚಕ್ರ'

ಶ್ರೀ. ನಿ. ವ್ಯಾ. ಬ., ಮುಂಬಯಿ.

"ಸ್ವಾತಂತ್ರ್ಯ ಬಂದಿದೆ; ಸ್ವರಾಜ್ಯ ಬಂದಿಲ್ಲ. ಹಳ್ಳಿ-ಹಳ್ಳಿಗಳಲ್ಲಿಯೂ ಬಡ ಒಕ್ಕಲಿಗರ ಸುತ್ತಲೂ ಅವರ ಅಜ್ಞಾನದ ಲಾಭವನ್ನು ಹೊಂದಿ, ಕೊಬ್ಬಿರುವ ಘಟಸರ್ಪವೊಂದು ಸುರುಳಿಸುತ್ತಿ ಕೂತಿದೆ. ಅದೊಂದು ವಿಷ-ವರ್ತುಲ . . . . ಇದು ಎಷ್ಟು ಭೀಕರವಾಗಿದೆಯೆಂಬುದನ್ನು ಇಲ್ಲಿ ಚಿತ್ರಿಸಲು ಯತ್ನಿಸಿದ್ದೇನೆ!" ನಿರಾಡಂಬರದ ಈ ಎರಡು ಮಾತುಗಳಲ್ಲಿ ಓದುಗರಿಗೆ ತನ್ನ ಹೊಸ ಕಾದಂಬರಿಯ ಪರಿಚಯ ಮಾಡಿಸಿಕೊಟ್ಟಿದ್ದಾರೆ, ಶ್ರೀ ಮಿರ್ಜಿ ಅಣ್ಣಾರಾಯರು. ಹಳ್ಳಿ-ಹಳ್ಳಿಯಲ್ಲಿಯೂ ಬಡ ಒಕ್ಕಲಿಗರ ಅಜ್ಞಾನದ ಲಾಭವನ್ನು ಹೊಂದಿ, ಕೊಬ್ಬಿರುವ ಘಟಸರ್ಪದ ವಿಷವರ್ತುಲದ ಚಿತ್ರಣ 'ಅಶೋಕ ಚಕ್ರ'. ಆ ಚಿತ್ರದಲ್ಲಿ ವಾಸ್ತವತೆಯಿದೆ, ಭೀಕರತೆಯಿದೆ, ಹಿಂದಿನ ಮತ್ತು ಇಂದಿನ ಅಸಮಾನ ಆರ್ಥಿಕ ವ್ಯವಸ್ಥೆಯ ಸಹಜ ಪ್ರತಿಕ್ರಿಯೆಗಳ ನಿರೂಪಣೆಯಿದೆ ಕಾದಂಬರಿಕಾರರ ಲೆಕ್ಕಣಿಕೆಯ ಹಿಂದೆ, ಸಂವೇದನೆಯ, ಅನುಕಂಪದ, ಅನುಭವದ, ಸೂಕ್ಷ್ಮದೃಷ್ಟಿಯ ಹಿನ್ನೆಲೆಯಿದೆ. ಇವೆಲ್ಲ ಕಾರಣಗಳಿಂದಾಗಿ ಮೊದಲನೆಯ ವರ್ಗದ ಕಾದಂಬರಿಗಳ ಮಟ್ಟಕ್ಕೇರುವ ಕನ್ನಡ ಕಾದಂಬರಿ — ಅಣ್ಣಾರಾಯರ 'ಅಶೋಕ ಚಕ್ರ'.

'ಅಶೋಕ ಚಕ್ರ' ಒಂದು ಆದರ್ಶ ವ್ಯಕ್ತಿಯ ಜೀವನ ಚಿತ್ರಣವಲ್ಲ. ಒಂದು ಸಾಮಾನ್ಯ ವ್ಯಕ್ತಿಯ ಬಾಳಿನಲ್ಲಿ ತುಂಬಿರುವ ಗೋಳಿನ ಚಿತ್ರಣ. 'ಅಶೋಕ ಚಕ್ರ'ದ ನಾಯಕನಾಗಿ ಓದುಗರ ಕಣ್ಣಮುಂದೆ ನಿಲ್ಲುವ ವ್ಯಕ್ತಿ ಬಾಬಣ್ಣ ಬರೇ ಉತ್ತರ ಕರ್ನಾಟಕಕ್ಕೆ ಸಂಬಂಧಿಸಿದವನಲ್ಲ. ಭಾರತದ ಬಡ ಏಳುನೂರು ಸಾವಿರ ಹಳ್ಳಿಗಳಲ್ಲಿ ಕೋಟಿಗಟ್ಟಲೆ ಬಾಬಣ್ಣನವರು ಇದ್ದಾರೆ. ಎಂತಲೇ ಈ ಕಾದಂಬರಿ ಭಾರತದ ಒಂದು ಸಾಮಾಜಿಕ ಸಮಸ್ಯೆಯ— ಅಲ್ಲ ಆರ್ಥಿಕ ಸಮಸ್ಯೆಯ — ಸ್ವರೂಪದರ್ಶನ ಮಾಡಿಸಿಕೊಡುತ್ತದೆ. ಆ ಸಮಸ್ಯೆಯ ಮೂಲ ಬಡತನ. ಆ ಸಮಸ್ಯೆಯ ಉತ್ತರ ಈ ಕಾದಂಬರಿಯಲ್ಲಿಲ್ಲ. ಅದನ್ನು ದೊರಕಿಸಿಕೊಡುವದು ಕಾದಂಬರಿಕಾರರ ಕೆಲಸವೂ ಅಲ್ಲ.

'ಅಶೋಕ ಚಕ್ರ'ದ ಕಥೆ ದುರಂತ. ಉತ್ತರ ಕರ್ನಾಟಕದ ಒಂದು ಹಳ್ಳಿ ಕಥಾಕ್ಷೇತ್ರ. ಉತ್ತರ ಕರ್ನಾಟಕದ ಹಳ್ಳಿಗರ ಸಾಮಾನ್ಯ ಜೀವನ

ಕ್ರಮವೇ ಕಥಾವಸ್ತು. ಕಥಾನಾಯಕ ಬಾಬಣ್ಣನ ಮದುವೆಯ ಪ್ರಕರಣ ದಿಂದ ಕಥೆ ಆರಂಭವಾಗುತ್ತದೆ. ನಾಲ್ಕು ಕೂರಿಗೆ ಅಡವಿಯ ಅಧಿಪತಿ, ನಾಲ್ಕು ಮಕ್ಕಳ ತಂದೆಯಾಗಿ, ನಾಲ್ಕು ಕೂರಿಗೆ ಅಡವಿಯನ್ನು ಕಳೆದು ಕೊಂಡು, ಅಕಾಲ ಮರಣಕ್ಕೆ ಆಹುತಿಯಾಗುವಲ್ಲಿ ಕಥೆ ಅಂತ್ಯವಾಗುತ್ತದೆ. ಈ ನಾಲ್ಕು ಕೂರಿಗೆ ಅಡವಿ ಕೈತಪ್ಪಿಹೋಗಲು ಕಾರಣವಾದ ವಾತಾವರಣ, ಮತ್ತು ಸಂದರ್ಭಗಳ ಚಿತ್ರಣದಲ್ಲಿ ಕಥೆಯ ಮಹತ್ವವನ್ನು ಕಂಡುಕೊಳ್ಳ ಬೇಕು. ಹಳ್ಳಿಗರ ಸಂಪ್ರದಾಯ ಶರಣತೆಯು, ಅದೃಷ್ಟವಾದದ, ಅಜ್ಞಾನ ದಾರಿದ್ರ್ಯಗಳ, ಪ್ರತಿಕ್ರಿಯೆಯಿಂದಾಗಿ ಅಳಿಯುವ ಸಂಸಾರಗಳ ಕಣ್ಣೀರ ಬಾಳುವೆಯ ಪರಿಚಯು ಬೇಕಾದರೆ 'ಅಶೋಕ ಚಕ್ರ' ಓದಬೇಕು.

'ಅಶೋಕ ಚಕ್ರ'ದಲ್ಲಿ ಬರುವ ಎಲ್ಲಾ ಪಾತ್ರಗಳೂ ವಾಸ್ತವ ಜೀವನ ದಲ್ಲಿ ಕಂಡುಬರುವಂಥ ಪಾತ್ರಗಳೇ. ಕಲ್ಪನೆಯ ಮಿರುಗು ಎಳ್ಳಷ್ಟಾದರೂ ಇಲ್ಲ. ಬಾಬಣ್ಣ ತನ್ನ ಮದುವೆಯಾದಂದಿನಿಂದ ಜೀವನವನ್ನಿದಿರಿಸುವಾಗ ಕಂಡುಬರುವ ಎಲ್ಲಾ ಅನುಕೂಲ ಪ್ರತಿಕೂಲ ಸನ್ನಿವೇಶಗಳಲ್ಲಿಯೂ ವಾಸ್ತವತೆಯು ಒಡೆದು ಕಾಣುತ್ತಿದೆ. ವಾಸ್ತವತೆಯೇ ಈ ಕಾದಂಬರಿಯ ಜೀವಾಳ.

ನಾಲ್ಕು ಕೂರಿಗೆ ಅಡವಿ ಕೈಬಿಟ್ಟಿದ್ದೂ ಸಾಲದ ವಿಷಚಕ್ರದಿಂದಾಗಿ. ಬಾಬಣ್ಣನ ಜೀವನದ ಅಕಾಲ ಕೊನೆಗೆ ಕಾರಣವಾದ ಈ ಆರ್ಥಿಕ ಸಮಸ್ಯೆ ಎಷ್ಟು ಕೋಟಿ ಹಳ್ಳಿಗರನ್ನು ಇಂದು ಕಾಡುವುದಿಲ್ಲ! ಈ ಸಮಸ್ಯೆಗೆ ಪೋಷಕ ವಾಗಿ ಬಂದು ನಿಂತಿದ್ದಾರೆ, ಸಹಾಯಕ ಪಾತ್ರಗಳಾದ—ಸ್ವಾರ್ಥ ದುರುದ್ದೇಶ ಗಳಿಂದ ಪ್ರೇರಿತನಾಗಿ ಬಾಬಣ್ಣನ ಅವನತಿಗೆ ಕಾರಣನಾದ ದಾಯಾದಿ ಕಲ್ಲಪ್ಪ, ಅಪ್ರಾಮಾಣಿಕ ವ್ಯವಹಾರದಿಂದಲೇ ಬೊಕ್ಕಸ ತುಂಬುವ ಸೆಟ್ಟರು, ಗೌಡರು, ಅನುಕೂಲ ಪ್ರತಿಕೂಲ ವಾತಾವರಣದಲ್ಲೆಲ್ಲ ತನ್ನ ಸ್ವಾರ್ಥ, ಮಾತ್ಸರ್ಯ ಗಳನ್ನು ಪೋಷಿಸಿಕೊಂಡು ಬರುವ ಗಂಗವ್ವನಂಥ ವ್ಯಕ್ತಿಗಳು. ಪರರಿಗೇ ನಾದರೇನು, ತನ್ನ ಮನೆ-ಹೊಲಗಳ ಭದ್ರತೆ, ಸಾರ್ವಭೌಮ ಎಂದು ತಿಳಿದ ಆದಪ್ಪ ಮಾಸ್ತರರ ತಂದೆ, ತನ್ನ ಯೌವನದ ಅಸಹಾಯ ಪರಿಸ್ಥಿತಿಯಲ್ಲಿ, ತಾನು ದಾರಿತಪ್ಪಿ ನಡೆದು, ಬಾಬಣ್ಣನಿಗೂ ಅಸಹಾಯ ಪರಿಸ್ಥಿತಿಯನ್ನು ತಂದೊಡ್ಡುವ ಗಂಗವ್ವನ ಮಗಳು ಸುಂದರಿ, ಇವರೆಲ್ಲ ಬಾಬಣ್ಣನ ಜೀವನದ ಒಂದು ಮೈಯನ್ನು ರೂಪಿಸಲು ಕಾರಣರಾಗುವವರು. ಇದು ಬಡತನ

ದಲ್ಲಿಯು ದುಃಖದ ಮೈ. ಇನ್ನು ಕಾದಂಬರಿಯ ಉಳಿದ ಪಾತ್ರಗಳು, ಬಾಬಣ್ಣನ ದುಃಖ ಜೀವನದಲ್ಲೂ ಕೆಲವು ಕಾಲ ತೃಪ್ತಿಯ ನಗುವರಳಿಸುವ ಪಾತ್ರಗಳು. ಅಳಿಯನ ಸುಖಜೀವನದ ಹಂಬಲ ಒಂದೆಡೆ, ತನ್ನ ಜೀವನದಲ್ಲಿ ಕವಿದ ಅತೃಪ್ತಿಯಿಂದಾಗಿ ರೂಪುಗೊಂಡ ಪ್ರಣಯಪ್ರಸಂಗವೊಂದರಿಂದ ಸ್ವಾಭಾವಿಕವಾಗಿ ಹುಟ್ಟುವ ಸ್ವಾರ್ಥ ಇನ್ನೊಂದೆಡೆ, ಇವೆರಡರ ಮಥನದಲ್ಲಿ ಅಳಿಯನ ಸಂಸಾರದ ಸುಖಜೀವನಕ್ಕಾಗಿ ಈತ ಮಾಡಬೇಕಾಗಿ ಬರುವ ತ್ಯಾಗದಲ್ಲಿ ಬಾಬಣ್ಣನ ಮಾವನ ವ್ಯಕ್ತಿತ್ವವನ್ನರಿತುಕೊಳ್ಳಬೇಕು. ಹೀಗೆಯೇ ಅದೃಷ್ಟವಾದ—ವ್ಯವಹಾರಗಳನ್ನು ಬೆರೆಸಿ, ಬಾಬಣ್ಣನಿಗೆ ಸಾಮಾನ್ಯ ವೇದಾಂತ ವನ್ನುಪದೇಶಿಸುವ ಚಂದ್ರವ್ವ, ಎಲ್ಲ ದುಃಖಕ್ಕೂ ಅಜ್ಞಾನವೇ ಕಾರಣ, ಅದಕ್ಕಾಗಿ ಶಿಕ್ಷಣದಿಂದಲೇ ಎಲ್ಲಾ ಸಮಸ್ಯೆಗಳಿಗೆ ಪರಿಹಾರೋಪಾಯಗಳನ್ನು ಕಂಡುಕೊಳ್ಳಬೇಕು ಎನ್ನುವ ಭಾವಜೀವಿ ಆದಪ್ಪ ಮಾಸ್ತರ, ತಮ್ಮನ ಜೀವನ ದಲ್ಲಿ ಕವಿದಿರುವ ದುಃಖವನ್ನು ಕಂಡು, ಅಸಹಾಯಳಾಗಿ ಮರುಗುವ ಬಾಳವ್ವ, ಮತ್ತು ಕಾದಂಬರಿಯ ಪಾತ್ರಗಳಲ್ಲಿ ಅತ್ಯಂತ ಸುಂದರವಾಗಿ ಪೋಷಿಸಲ್ಪಟ್ಟು, ಓದುಗರ ಕಣ್ಣಮುಂದೆ ಅಚ್ಚಳಿಯದಂತೆ ನಿಲ್ಲುವ ಬಾಬಣ್ಣನ ಮಡದಿ ಪದ್ಮಾವತಿ ಇವರೆಲ್ಲ ಬಾಬಣ್ಣನ ಜೀವನದ ತೃಪ್ತಿಯ ಮೈಯನ್ನು ರೂಪಿಸು ವವರು.

ಹಿಂದೆಯೇ ಹೇಳಿದಂತೆ ಮದೆಯಿಂದ ಸಾಲಗಾರನಾಗಿ ಮೆರೆಯುವ ಬಾಬಣ್ಣ ಬೆಳೆಯುವ ಸಾಲದಿಂದ ನಾಲ್ಕು ಕೂರಿಗೆ ಅಡವಿಗಳು ತನ್ನ ಕೈಬಿಡು ವದನ್ನು ಕಾಣುತ್ತಾನೆ. ಅದನ್ನು ತಡೆಗಟ್ಟಲು ಶತಪ್ರಯತ್ನ ಮಾಡುತ್ತಾನೆ. ಎಲ್ಲವೂ ವಿಫಲ. ಈ ಆರ್ಥಿಕ ದುರಂತದ ಪ್ರತಿಕ್ರಿಯೆಗಳನ್ನು ಚಿತ್ರಿಸುವ ಸನ್ನಿವೇಶಗಳು ಕಾದಂಬರಿಯಲ್ಲಿ ಹಲವಾರು ಇವೆ. ಆ ಸನ್ನಿವೇಶ ಚಿತ್ರಣದಲ್ಲಿ ಅಣ್ಣಾರಾಯರ ಸೂಕ್ಷ್ಮದೃಷ್ಟಿ ಮತ್ತು ಪ್ರತಿಭೆಗಳನ್ನು ಕಾಣಬೇಕು. ಇವು ಗಳಿಂದಾಗಿಯೇ ಈ ಕಾದಂಬರಿ ಲೇಖಕರ 'ನಿಸರ್ಗ'ದ ಮಟ್ಟಕ್ಕೆ ಬಂದು ನಿಲ್ಲುತ್ತದೆ. 'ರಾಷ್ಟ್ರಪುರುಷ'ದ ಕೊರತೆಗಳನ್ನು ಮರೆಸುತ್ತದೆ.

ಇನ್ನೊಂದು ಈ ಕಾದಂಬರಿಯ ವಿಶೇಷ: ವ್ಯಕ್ತಿಗಳ ಮೇಲೆ ಆವರಣ ದಿಂದುಂಟಾಗುವ ಸಹಜ ಪ್ರತಿಕ್ರಿಯೆಯ ಸ್ಪಷ್ಟ ಚಿತ್ರಣ. ಅದೂ ಕಾದಂಬರಿ ಬಡತನದ ಆರ್ಥಿಕ ಸಮಸ್ಯೆಯನ್ನು ಚಿತ್ರಿಸುವದರಿಂದ ಹೆಜ್ಜೆಹೆಜ್ಜೆಗೂ ಓದುಗನಿಗೆ ದಾರಿದ್ರ್ಯದ ಬಾಳಿನಲ್ಲಿರುವ ಕಣ್ಣೀರು, ಅಲ್ಪತೃಪ್ತಿಗಳ ಹಿಂದೆ

ಅಡಗಿರುವ ವೇದನೆಯು ಅರಿವಾಗುತ್ತದೆ. ಗಂಡನ ಊಟಕ್ಕೆಂದು ಹೊಲಕ್ಕೆ ಬುತ್ತಿ ತುಂಬಿಕೊಂಡು ಹೋಗುವ ಪದ್ಮಾವತಿ ಹೊಲದ ಸೀಮೆ ಸಮೀಪಿಸು ವಾಗ, ಹಸುರು ಹುಲ್ಲಿನ ಮೇಲೆ ಕಾಲಿಡುವಾಗ 'ಎಷ್ಟು ಚೆನ್ನಾಗಿ ಬೆಳೆದಿದೆ ಹುಲ್ಲು; ಎಮ್ಮೆಯೊಂದಿದ್ದರೆ ಹೊಟ್ಟೆತುಂಬ ಮೇಯಿಸಿಕೊಂಡು ಹೋಗ ಬಹುದಿತ್ತು' ಎಂದುಕೊಳ್ಳುತ್ತಾಳೆ. ಹೊಲ ಮಾರಿ ಕೈಬಿಟ್ಟು ಹೋದ ಮೇಲೆ, ಅದನ್ನು ದಾಟಿ ತನ್ನ ಇನ್ನೊಂದು ಹೊಲಕ್ಕೆ ಹೋಗುವಾಗ ಬೆಳೆ ತುಂಬಿ ನಿಂತ ತಮ್ಮ ಹೊಲವನ್ನು ಕಂಡು, ಕೈಬಿಟ್ಟು ಹೋಯಿತಲ್ಲಾ; ಅದು ಮರಳಿ ಕೈಗೆ ಬಂದೀತೆ' ಎಂದು ಕನವರಿಸುತ್ತಾಳೆ. ಇಂಥ ಸನ್ನಿವೇಶಗಳಲ್ಲಿ ಬಾಬಣ್ಣನ ಜೀವನ ಒಡೆಯುವಿಕೆಯಿಂದ ಪ್ರಕಟವಾಗುವ ವೇದನೆಯನ್ನು ಮನಗಾಣಬೇಕು. ಸುಂದರಿಯ ಬಲೆಯಲ್ಲಿ ಬಿದ್ದು, ದಾರಿ ತಪ್ಪಿದ ಬಾಬಣ್ಣ ಅಪರಾಧ ಬಯಲಿಗೆ ಬಂದಾಗ, ಮನೆ ಬಿಟ್ಟು ಹೋದಾಗ, ಪದ್ಮಾವತಿಯ ವ್ಯಕ್ತಿತ್ವದ ಹಿರಿಮೆ, ತಾತೋಬಾನ ತ್ಯಾಗ-ನಿಷ್ಠೆಗಳ ಸುಂದರ ಚಿತ್ರಣವಿದೆ. ಮಾವ ತಂದುಕೊಟ್ಟ ಎಮ್ಮೆಯಿಂದಾಗಿ ಜೀವನ ನಿರ್ವಹಿಸುವಾಗ 'ತುಂಬಿದ ಬಸಿರೆಯಾದರೂ ಪದ್ಮಾವತಿ ಮಕ್ಕಳನ್ನು ಕರೆದುಕೊಂಡು, ಎಮ್ಮೆಯನ್ನು ಹೊಡೆದುಕೊಂಡು ಹೊಲಕ್ಕೆ ಹೋಗುವಳು. ಸಂಜೆಯ ವರೆಗೆ ಅಲ್ಲಿಯೇ ಕಳೆಯುವಳು. ಹೊಲದಲ್ಲಿಯ ಬೆಳೆಯನ್ನು ಕಂಡು, ಹಿರಿ ಹಿರಿ ಹಿಗ್ಗುವಳು. 'ಬೆಳೆ ಬಂತು, ತಿನ್ನುವವರು ಇಲ್ಲವಾದರಲ್ಲ' ಎಂದು ಮರುಗುವಳು'— ಇಂಥ ಸನ್ನಿವೇಶಗಳಲ್ಲಿ ಕಂಡುಬರುವ ಕಟುಕ ವ್ಯಂಗ್ಯ, ಆ ವ್ಯಂಗ್ಯದ ಹಿಂದೆ ಅಡಗಿರುವ ಸಮಸ್ಯೆಯ ಸ್ಪಷ್ಟ ಪರಿಚಯ ಮಾಡಿಕೊಡುವದು.

ಕಥೆಯ ಆದಿಗಿಂತಲೂ ಮಧ್ಯ ಮತ್ತು ಕೊನೆಯ ಭಾಗಗಳು ಅತ್ಯಂತ ಮಾರ್ಮಿಕವಾಗಿ ಚಿತ್ರಿಸಲ್ಪಟ್ಟಿವೆ. ನಾಲ್ಕು ಕೂರಿಗೆ ಅಡವಿಯೂ ಕೈಬಿಟ್ಟ ಮೇಲೆ ಬಾಬಣ್ಣ ಉದರ ನಿರ್ವಹಣಕ್ಕಾಗಿ ಮಾಡುವ ಹೋರಾಟದ ಗಾಂಭೀರ್ಯ ಮೊದಲು ಕಂಡುಬರುವದಿಲ್ಲ. ಒಂದು ದೃಷ್ಟಿಯಿಂದ ಇದು ಸ್ವಾಭಾವಿಕವೇ. ಬಿಡಿಸಿಕೊಳ್ಳಲಾಗದ ಬಲೆಯಲ್ಲಿ ಸಿಕ್ಕಿಬಿದ್ದಿರುವೆ ಎಂದು ಆತ ತಿಳಿದಿದ್ದರೂ ಒಣ ಅಭಿಮಾನ ಮತ್ತು ಲಹರಿಯ ಮನೋವೃತ್ತಿ, ಆತ ಹೆಜ್ಜೆಯಿಂದ ಹೆಜ್ಜೆಗೂ ತಪ್ಪಿಬೀಳುವಂತೆ ಮಾಡುತ್ತವೆ. ಆತನ ಜೀವನ ಕ್ಕೊಂದು ನಿಯಂತ್ರಣ ತರಲು ಪದ್ಮಾವತಿ ಪಡುವ ಸಾಹಸ ಕಣ್ಣೀರಿಳಿಸು ವಂಥದು. ಈ ಹೋರಾಟದಿಂದಾಗಿಯೇ ಕನ್ನಡ ಕಾದಂಬರಿಗಳಲ್ಲಿ ಕಂಡು

ಬರುವ ಸ್ತ್ರೀ ಪಾತ್ರಗಳಲ್ಲಿ ಮೇಲ್ಮಟ್ಟದ ಪಾತ್ರಗಳ ಸಾಲಿನಲ್ಲಿ ನಿಲ್ಲಬಹುದಾದಂಥ ಪಾತ್ರ ಪದ್ಮಾವತಿಯದು.

ಗಂಡನಿಗಾಗಿ ಎಂಥ ತ್ಯಾಗವನ್ನೂ ಮಾಡಲು ಸಿದ್ಧಳಾದ ಪದ್ಮಾವತಿಯ ಪಾತ್ರದಲ್ಲಿ ಭಾರತೀಯ ಸ್ತ್ರೀತ್ವದ ಹಿರಿಮೆಯಿದೆ. ಸುಖದಲ್ಲಿ ಕಳೆದ ಬಾಲ್ಯ ಜೀವನದ ಸ್ಮೃತಿಗಳನ್ನು ಮರೆತು, ಕಷ್ಟನಿಷ್ಠುರಗಳನ್ನು ಸಹಿಸುವ ಅವಳ ಸಹಿಷ್ಣುತೆಯಲ್ಲಿ ಕೆಚ್ಚೆದೆಯ ಕಿಡಿಯಿದೆ. ಅಡ್ಡದಾರಿ ಹಿಡಿದ ಗಂಡನನ್ನು ಕ್ಷಮಿಸಿ, ತನ್ನೆಡೆಗೆ ಸೆಳೆದುಕೊಳ್ಳುವ ಅವಳ ಗುಣವಿಶೇಷದಲ್ಲಿ, ಅನನ್ಯ ಪ್ರೀತಿ ಇದೆ. ಮನೆಯಲ್ಲಿ ಇನ್ನೊಂದು ಜೀವ ಹೆಚ್ಚಾಗಿ ಹೊಟ್ಟೆಯ ಪ್ರಶ್ನೆ ಬರುವಾಗ 'ಊರಲ್ಲಿ ಇನ್ನೊಬ್ಬ ಗುದ್ದಲಿ ಗೆಣೆಯ ಹುಟ್ಟಿದ' ಎಂದು ಆಕೆ ಹೇಳುವಾಗ, ಆರ್ಥಿಕ ವಿಷಮತೆಯ ದುರಂತದ ಪ್ರತಿಕ್ರಿಯೆಯ ಅರಿವಿದೆ. ಹೊಲಗಳನ್ನು ಮರಳಿ ಕೊಡಿಸುವ ಆಶೆಯಿಂದ ಆದಪ್ಪ ಮಾಸ್ತರರು ಬರೆಯಬೇಕಾದ ಅರ್ಜಿಗೆ ಬಾಬಣ್ಣ ಮನೆಬಿಟ್ಟು ಹೋದುದರಿಂದ ಪದ್ಮಾವತಿಯ ಅಂಕಿತಕ್ಕೆಂದು ಆಕೆಯ ಬಳಿ ಬಂದಾಗ ಅವಳು ಹೇಳುವ 'ಬಂಗಾರದಂಥ ಅವರೇ ಹೋದ ಮೇಲೆ ಈ ಹೊಲ ಮನೆ ತಗೊಂಡ ಏನ ಮಾಡಬೇಕಾಗೇದ ನನಗೆ' ಎನ್ನುವ ಮಾತಿನಲ್ಲಿ ಪತಿಯೇ ಸರ್ವಸ್ವವೆಂಬ ಭಕ್ತಿಯ ಚಿತ್ರಣವಿದೆ. ಈ ಎಲ್ಲ ಉಬ್ಬರ ಇಳಿತಗಳಲ್ಲಿ ತೇಲುತ್ತ ತನ್ನ ವಿಶೇಷ ವ್ಯಕ್ತಿತ್ವದಿಂದ ತನಗೊಂದು ವಿಶಿಷ್ಟಸ್ಥಾನವನ್ನು ಗಳಿಸಿಕೊಂಡ ಪದ್ಮಾವತಿಯ ಪಾತ್ರ ಮರೆಯಲಾಗದ ಪಾತ್ರ.

ಬಾಬಣ್ಣನ ಕೊನೆಯ ದಿನಗಳನ್ನು ರೂಪಿಸುವಾಗ ಕಾದಂಬರಿಕಾರರು ತಮ್ಮ ವೇದನೆಯನ್ನೆಲ್ಲ ಹೊರಗೆಡಹಿದ್ದಾರೆ. ಆತ ತನ್ನ ಅಸಹಾಯ ಪರಿಸ್ಥಿತಿಯಲ್ಲಿ ಬಾಣಂತಿ ಹೆಂಡತಿಯ ಮತ್ತು ಮಕ್ಕಳ ಹೊಟ್ಟೆ ತುಂಬಿಸಲು ಕಳವು ಮಾಡಬೇಕಾಗಿ ಬಂದು, ಅದರಿಂದಾಗಿ ಅವಮಾನಿತನಾಗಿ ತನ್ನ ಸಾವನ್ನು ತಾನೇ ತಂದುಕೊಳ್ಳುವ ಕೊನೆ ಅತ್ಯಂತ ಭಯಾವಹ ಮತ್ತು ಗಂಭೀರ. ಆದರಿದು ಸತ್ಯ. ಈ ರುದ್ರ ಚಿತ್ರಣದಲ್ಲಿ ಭಾರತದ ಕೋಟಿಗಟ್ಟಲೆ ಬಾಂಧವರ ಕೂಗು ಮೂಡಿದೆ.

ಕಾದಂಬರಿಯ ಸಹಾಯಕ ಪಾತ್ರಗಳೆಲ್ಲವೂ ಚೆನ್ನಾಗಿ ಪೋಷಿಸಲ್ಪಟ್ಟಿವೆ. ಕಾದಂಬರಿಯ ಬೆಳವಣಿಗೆಗೆ ಸಹಾಯಕವಾಗಿಯೇ ಇವೆ. ಕಾದಂಬರಿಯ ಹೆಸರು ಮಾತ್ರ 'ಅಶೋಕ ಚಕ್ರ' ಎಂದಿರುವುದು ಸರಿಯೆಂದು ಕಂಡುಬರು

ಮುನ್ನುಡಿಕಾರರು ಹೇಳಿದಂತೆ ಗ್ರಾಮ್ಯ ಗ್ರಾಂಥಿಕಗಳ ಬೆರಕೆಯಿಂದ ಮಾತ್ರ ಕೆಲವು ಕಡೆಗಳಲ್ಲಿ ಹದಗೆಟ್ಟಿದೆ. ಇದೊಂದು ಕೊರತೆ ದ್ದರೆ ಕಾದಂಬರಿ ಇನ್ನೂ ಉತ್ತಮವಾಗಬಹುದಿತ್ತು.

ಇಂಥ ಉತ್ತಮ ಕಾದಂಬರಿಯನ್ನು ಓದುಗರಿಗೆ ಒದಗಿಸಿಕೊಟ್ಟ ರಾಯರಿಗೆ . . . ಎಲ್ಲರ ಕೃತಜ್ಞತೆಗಳು ಸಲ್ಲಬೇಕು.

['ನುಡಿ'ಯ ಕೃಪೆಯಿಂದ.]

# ಚಿಕ್ಕ ಮಹಾಕಾವ್ಯ: 'ರಾಮಣ್ಣ ಮಾಸ್ತರು'

**ಪ್ರೊ. ಸ. ಸ. ಮಾಳವಾಡ** ಎಂ. ಎ. ಧಾರವಾಡ

"ಕನ್ನಡದಲ್ಲಿ ಇತ್ತೀಚೆಗೆ ಪ್ರಕಟವಾದ ಕಾದಂಬರಿಗಳಲ್ಲಿ 'ನಿಸರ್ಗ'ವು ಒಂದು ಸರ್ವೋತ್ಕೃಷ್ಟವಾದ ಕಾದಂಬರಿಯೆಂದು ಮನ್ನಿಸಲ್ಪಟ್ಟಿದೆ . . . ಮಿರ್ಜಿ ಅಣ್ಣಾರಾಯರ ಈ ಕೃತಿಯಲ್ಲಿ ವಾಸ್ತವತೆ ಹಾಗೂ ಕಲೆಗಳು ಹಾಸುಹೊಕ್ಕಾಗಿವೆ. ಇದು ಜೀವನದ ಸತ್ಯಪೂರ್ಣ ಮತ್ತು ಮನೋವೇಧಕ ದಿಗ್ದರ್ಶನವಿದ್ದಂತಿದೆ".*—ಎಂದು 'ನಿಸರ್ಗ'ವನ್ನು ವಿಮರ್ಶಿಸಿದ ಪ್ರೊ. ಮಾಳವಾಡರವರು 'ರಾಮಣ್ಣ ಮಾಸ್ತರು' ಕೃತಿಗೆ 'ಮುನ್ನುಡಿಯ ಮಂಗಲತಿಲಕವನ್ನಿಟ್ಟು ಹರಸಿದ್ದಾರೆ'. ಅದು ಹೀಗಿದೆ:—

ಸಾಹಿತಿಯು ತಾನು ಸರಿಯಾಗಿ ಅರಿತ ಅನುಭವವನ್ನು ತಾನು ಪಡೆದ ಪ್ರಚೋದನೆಯಿಂದ ಸಾಹಿತ್ಯಕ್ಕೆ ಇಳಿಸಿದರೆ ಕೃತಿಯು ಹಿತಕಾರಿಯಾಗುವದೆಂದು ನಂಬುವವರಲ್ಲಿ ನಾನೊಬ್ಬ. ಅಂತಹ ಅನುಭವದ ತೀವ್ರವಾದ ಪ್ರಚೋದನೆಯಿಂದ ರೂಪುಗೊಂಡ ಈ ಕೃತಿಯು ಸಹಜ ಸೌಂದರ್ಯದೊಂದಿಗೆ ಕೂಡಿ ಪರಿಣಾಮಕಾರಿಯಾಗಿದೆ. ತನಗೆ ಸಲ್ಲದ ಅನುಭವದ ಚಿತ್ರ ಕೃತಕವಾಗಿರುವಂತೆ ಉದ್ದಿಷ್ಟ ಕಾರ್ಯದಲ್ಲಿ ಸಫಲತೆಯನ್ನು ಪಡೆಯುವದಿಲ್ಲ. 'ರಾಮಣ್ಣ ಮಾಸ್ತರು' ಕಾದಂಬರಿ ಇಂತಹ ದೋಷಕ್ಕೆ ಪಕ್ಕಾಗಿಲ್ಲ. ಅಂತೆಯೇ ಇದು ಸಫಲ ಕೃತಿಯಾಗಿದೆ.

ಪ್ರಾಥಮಿಕ ಶಾಲೆಯ ಶಿಕ್ಷಕನ ಬಾಳಿನ ಗೋಳಿನ ಚಿತ್ರವೇ ಈ ಕಾದಂಬರಿ. ಉದಾತ್ತ ಆದರ್ಶ, ಅನುಕೂಲತೆಗಳ ಅಭಾವ, ಅಡೆತಡೆಗಳ ಪ್ರಾಬಲ್ಯ—ಈ ಸುಳಿಯಲ್ಲಿ ಸಿಕ್ಕವ ರಾಮಣ್ಣ ಮಾಸ್ತರ. ಅಣ್ಣಾರಾಯ ಮಾಸ್ತರರೂ ಅದೇ ಗುಂಪಿಗೆ ಸೇರಿದವರು. ಆದುದರಿಂದ ಇಲ್ಲಿಯ ಚಿತ್ರ

---

* Nisarga has been hailed as one of the best novels produced recently in Karnataka . . . . We have in Shri Mirji Annarao's novel realism blended with art, a faithful but attractive representation of life.

—S. S. MALWAD.

*—The Indian P. E. N. June 1947.*

ನಿರ್ಲಕ್ಷ್ಯವಾಗಿದೆ. ನಮ್ಮ ಸಮಾಜದಲ್ಲಿ ಪ್ರಾಥಮಿಕ ಶಾಲೆಯ ಶಿಕ್ಷಕನ ಜೀವನ, ಸ್ಥಾನ ಮೇಲ್ಮಟ್ಟದಲ್ಲಿ ಇಲ್ಲ. ಆತನ ಮೈ ಮುದುಡುವ ಇರುವಿಕೆ ಹಾಸ್ಯಾಸ್ಪದವಾಗಿದೆ. ಆದರೂ ಮುಂಬಯಿ ಪ್ರಾಂತದಲ್ಲೆಲ್ಲ ವ್ಯಾಪಿಸಿದ ಶಿಕ್ಷಕರ ಸಂಪು ನಮ್ಮ ದೇಶದ ೧೯೪೭–೪೭ರ ಇತಿಹಾಸದಲ್ಲಿ ಮಾಸ್ತರ ವರ್ಗಕ್ಕೆ ಒಂದು ಮಹತ್ವದ ಸ್ಥಾನವನ್ನು ದೊರಕಿಸಿಕೊಟ್ಟಿತು. ಇಲಿಯಂತಿದ್ದ ಶಿಕ್ಷಕ ಆಗ ಹುಲಿಯಂತೆ ತೋರಿದ. ಆ ಸಂಘಟನೆಗೆ ಬೆರಗಾಗದವರೇ ಇಲ್ಲ. ಆ ಸಂಪಿನ ಬಿರುಗಾಳಿಗೆ ಸಿಕ್ಕ ಒಂದು ತರಗೆಲೆಯ ಚಿತ್ರ ಈ ಕಾದಂಬರಿಯಲ್ಲಿದೆ. ಅದರೊಂದಿಗೆ ಹಳ್ಳಿಯ ಮಾಸ್ತರನ ಜೀವನಕ್ಕೆ ಅಂಟಿಕೊಂಡು ಬಂದ ಹಳ್ಳಿಯ ಕುಲಕರ್ಣಿ, ಪಂಚ, ಸಿರಿವಂತ ರೈತ, ಶೆಟ್ಟರು, ಹೆಡ್‌ಮಾಸ್ತರ ಇವರ ಪಾತ್ರ ಪ್ರದರ್ಶನವೂ ಇದೆ.

ಸಹಜವೂ ಸ್ವಾರಸ್ಯಕರವೂ ಆದ ಸಂಭಾಷಣೆಯೇ ಈ ಕಾದಂಬರಿಯ ಜೀವಾಳ. ಮೊದಲಿನಿಂದ ಕೊನೆಯ ವರೆಗೂ ಅಂತಹ ಸಂಭಾಷಣೆಯಿಲ್ಲಿದೆ. ಅಲ್ಲಲ್ಲಿ ವರ್ಣನೆಯ ತುಣುಕುಗಳೂ ಬಂದಿವೆ. ರಾಮಣ್ಣ ಮಾಸ್ತರರ ಸಾಯಕಲ್ ಮೇಲಿನ ಪ್ರವಾಸದಲ್ಲಿ ಉತ್ಪ್ರೇಕ್ಷಾಲಂಕಾರದ ರೀತಿ ಕಂಡು ಬರುತ್ತಿದೆ. ಈ ಕಾದಂಬರಿಯ ಸಂಭಾಷಣೆ, ವರ್ಣನೆಗಳು ಲೇಖಕರ ಲೇಖನ ಕಲೆಯ ಮಾದರಿಯನ್ನು ತೋರುವಂತಿವೆ.

ನಿಸರ್ಗ ಕಾದಂಬರಿಯ ಹರವು ದೊಡ್ಡದು; ಸಮಸ್ಯೆ ಆಳವಾಗಿರುವಂತೆ ನಿಸರ್ಗಕೃತವೂ ಅಹುದು. ಹಳ್ಳಿಯ ಮಾಸ್ತರನ ಜೀವನದ ವ್ಯಾಪ್ತಿ ಸಣ್ಣದೇ ಸರಿ. ಇಲ್ಲಿಯ ಸಮಸ್ಯೆ ಮನುಷ್ಯಕೃತವೂ ಅಹುದು. ನಿಸರ್ಗಕೃತ ಸಮಸ್ಯೆಯನ್ನು ಕುರಿತು ನಿಟ್ಟುಸುರು ಬಿಡುವುದಾದರೆ ಮನುಷ್ಯಕೃತ ಸಮಸ್ಯೆಯ ಬಗೆಗೆ ಸಂತಾಪ ಸೂಚಿಸಬೇಕಾಗುತ್ತದೆ. ಆ ಕಾರ್ಯ ಇಲ್ಲಿ ನಡೆದಿದೆ. 'ನಿಸರ್ಗ' ಕಾದಂಬರಿಯ ಭಾಷೆಯಲ್ಲಿ ನಿಸರ್ಗದ ರೀತಿಯಿದ್ದರೆ ಮಾಸ್ತರನ ಜೀವನದಲ್ಲಿ ಸ್ವಲ್ಪ ತಿದ್ದಿ ಮಾತನಾಡುವ ಭಾಷೆಯಿದೆ. ಆದರೂ ದೇಸಿಯ ಚೆಲುವನ್ನು ಕಾಯ್ದುಕೊಳ್ಳಲಾಗಿದೆ. ಜೈನರ ಮನೆಮಾತಿನ ಸ್ವಾರಸ್ಯವೂ ಅಲ್ಲಲ್ಲಿ ಹಣಕಿಹಾಕಿದೆ.

ಹಳ್ಳಿಯ ಜೀವನ, ಪಾತ್ರವನ್ನು ಕೆತ್ತುವಲ್ಲಿ ಪಳಗಿದ ಅಣ್ಣಾರಾಯರ ಕೈಯು ಇಲ್ಲಿ ರಾಮಣ್ಣ ಮಾಸ್ತರ, ಇಂದಿರೆ, ಸಕ್ಕವ್ವ ಮುದುಕಿ, ಭರಮಪ್ಪ, ಭೀಮವ್ವ, ಸಿದ್ದವ್ವ, ಪಂಚರು, ಇವೇ ಮೊದಲಾದ ಪಾತ್ರಗಳನ್ನು ಚಿತ್ರಿಸಿದೆ.

ಈ ಪಾತ್ರಗಳಲ್ಲೆಲ್ಲ ಜೀವಕಳೆಯಿದೆ; ಸ್ವಾಭಾವಿಕತೆಯಿದೆ. ಶ್ರೀ ಮಿರಜಿ ಅಣ್ಣಾರಾಯರು, ಗೋರೂರರು, ಕಾರಂತರು, ಹಿ. ಈಶ್ವರನ್ನರು ಸಾಹಿತ್ಯ ಕ್ಷೇತ್ರದಲ್ಲಿ ಪದಾರ್ಪಣೆ ಮಾಡುವದಕ್ಕೆ ಮೊದಲು, ನಮ್ಮ ಸಾಹಿತ್ಯ ಪ್ರಪಂಚದ ಪಾತ್ರರಚನೆಯು ಅಪೂರ್ಣವಾದಂತಿತ್ತು. ನಮ್ಮ ದೇಶದ ಬಹುಭಾಗವಾದ ಹಳ್ಳಿಯ ಜೀವನದ ಪಾತ್ರಗಳ ಯಥಾರ್ಥ ಚಿತ್ರಣದ ಕೊರತೆ ತೋರುತ್ತಿತ್ತು. ಶ್ರೀ ಗೋರೂರರ ಪಾತ್ರರಚನೆ ಕರ್ಣಾಟಕದ ಒಂದು ಭಾಗದ ಹಳ್ಳಿಯ ಪಾತ್ರಗಳನ್ನು ಕಾರಂತರು ಇನ್ನೊಂದು ಭಾಗದ ಪಾತ್ರಗಳನ್ನು ಸಾಹಿತ್ಯ ಲೋಕಕ್ಕೆ ತಂದರೂ ಉತ್ತರ ಕರ್ಣಾಟಕದ ಹಳ್ಳಿಯ ಜೀವನದಲ್ಲಿ ಸಮರಸ ರಾದವರ ಲೆಕ್ಕಣಿಕೆಯು ಅಂತಹ ಪಾತ್ರಗಳನ್ನು ಚಿತ್ರಿಸುವ ಕಾರ್ಯವು ಉಳಿದಿತ್ತು. ಈಚೆಗೆ ಆ ಕೊರತೆ ಕೆಲವಂಶದಲ್ಲಿ ತುಂಬಿ ಬರಹತ್ತಿದೆ. ಈ ಕಾದಂಬರಿಯಲ್ಲಿ ಹಳ್ಳಿಯ ಜೀವನದ ಒಂದು ಪ್ರಾತಿನಿಧಿಕ ಚಿತ್ರ ಕಂಡು ಬರುತ್ತಿದೆ. ಇಲ್ಲಿಯ ಪಾತ್ರಗಳ ವಾಸ್ತವತೆಯನ್ನು ಹಳ್ಳಿಯಿಂದಲೇ ಬಂದ ನಾನಂತೂ ಮನಸಾರೆ ಮೆಚ್ಚಿಕೊಂಡಿದ್ದೇನೆ. ಆ ಆ ಪಾತ್ರಗಳನ್ನು ಅರ್ಥ ವತ್ತಾಗಿ ಚಿತ್ರಿಸಲಾಗಿದೆ. ಅಲ್ಲದೆ ನಮ್ಮ ಕೌಟುಂಬಿಕ ಜೀವನದ 'ಚಿರಂತನ ತ್ರಿಕೋಣ'ವಾದ, ತಾಯಿ, ಮಗ, ಸೊಸೆಯರ ಸಮಸ್ಯೆಯು ಸ್ವಲ್ಪದರಲ್ಲಿ ಯಾದರೂ ಸ್ವಾರಸ್ಯಪೂರ್ಣವಾಗಿ ಬಂದಿದೆ. ಶಿಕ್ಷಕರ ಸಂಪಿನ ಪ್ರಾಸಂಗಿಕ ಚಿತ್ರದೊಂದಿಗೆ ಕಂಟ್ರೋಲ್, ಬ್ಲಾಕ್‌ಮಾರ್ಕೇಟ್, ಹಳ್ಳಿಯ ರಾಜಕಾರಣ ಇವೂ ಸೇರಿಕೊಂಡಿವೆ. ಪ್ರಚಾರದ ಉದ್ದೇಶವಿಲ್ಲದಿದ್ದರೂ ಯಥಾರ್ಥವಾದ ಚಿತ್ರವನ್ನೇ ಕೊಟ್ಟು, ಸಾಹಿತ್ಯಕೃತಿಯನ್ನು ಆಕರ್ಷಕ ಮಾಡಬಹುದೆಂಬು ದಕ್ಕೆ 'ರಾಮಣ್ಣ ಮಾಸ್ತರು' ಕಾದಂಬರಿಯು ಒಂದು ಉದಾಹರಣೆಯಾಗ ಬಲ್ಲದು. 'ನಿಸರ್ಗ' ಕಾದಂಬರಿಯ ವ್ಯಾಪ್ತಿಯು ದೊಡ್ಡದಾಗಿರುವಂತೆ ಆ ಕಥೆಯ ಕಾಲಾವಧಿಯೂ ವಿಸ್ತಾರವಾದುದು. ಇಲ್ಲಿಯ ಕ್ಷೇತ್ರ ಸಣ್ಣದು; ಕಾಲಾವಧಿಯೂ ಚಿಕ್ಕದು. ಆರೇಳು ದಿನಗಳ ಘಟನೆಗಳನ್ನೇ ಇಲ್ಲಿ ಪೋಣಿಸಿ ಕೊಳ್ಳಲಾಗಿದೆ. ಗ್ರಂಥಕರ್ತರು ಅವಧಿಯ ಐಕ್ಯವನ್ನು ಜಾಣ್ಮೆಯಿಂದ ಸಾಧಿಸಿದ್ದಾರೆ. ಕಾರಂತರ 'ಮುಗಿದ ಯುದ್ಧ'ದಲ್ಲಿ ಅಚ್ಯುತನ ಜೀವನದ ವಿಶಾಲ ಭಾಗ ಬಂದಿದೆ. ಇಲ್ಲಿ ರಾಮಣ್ಣ ಮಾಸ್ತರರ ಜೀವನದ ಕೆಲವೊಂದು ಅಂಶವನ್ನೇ ಕೇಂದ್ರೀಕರಿಸಿಕೊಳ್ಳಲಾಗಿದೆ. ಅವಧಿಯ ಐಕ್ಯಸಾಧನೆಗೆ ಅದು ಸಹಾಯಕಾರಿಯೂ ಆಗಿದೆ.

ಸಂಪು ಪ್ರಾಸಂಗಿಕ; ಮಾಸ್ತರರ ಜೀವನದ ಸಮಸ್ಯೆ ಮನುಷ್ಯಕೃತ. ಅಂತೆಯೇ ಅವುಗಳ ನಿವಾರಣೆ ಕಾಲಾನುಕ್ರಮದಲ್ಲಿ ನಡೆಯುಬಹುದು. ಆದರೆ ರಾಮಣ್ಣ ಮಾಸ್ತರರ ಹೆಂಡತಿ ಇಂದಿರೆಯ ಪಾತ್ರ ನಮ್ಮ ಮನದಲ್ಲಿ ಬಹುಕಾಲ ಅಚ್ಚಳಿಯದೆ ಉಳಿಯುವಂತೆ ಮೂಡಿಬಂದಿದೆ. ರಾಮಣ್ಣ ಮಾಸ್ತರರ ಆದರ್ಶವನ್ನು ನಾವು ಮೆಚ್ಚಬಹುದು. ಆದರೆ ಆತನು ತನ್ನ ಹಾಗೂ ತನ್ನ ವರ್ಗದ ಬಗೆಗೆ ಪುನಃ ಪುನಃ ವ್ಯಕ್ತವಡಿಸುವ ವಿಚಾರಗಳಲ್ಲಿ ಆತ್ಮಪ್ರತಿಷ್ಠೆ ಹೆಚ್ಚಾಗಿರುವಂತೆಯೂ ಅನಿಸುತ್ತಿದೆ. ನಮ್ಮ ಸಮಾಜದಲ್ಲಿ ಮಾಸ್ತರನ ಸ್ಥಾನ ಉಚಿತವಾದ ಮಟ್ಟದಲ್ಲಿ ಇಲ್ಲವೆಂಬುದೇನೋ ನಿಜ. ಆದರೆ ಅದಕ್ಕೆ ಮಾಸ್ತರರ ಹೊಣೆಗಾರಿಕೆಯೂ ಇರಬಹುದೇನೋ? ಅಡೆತಡೆಗಳಿರುವುದೂ ನಿಜ. ಆದರೂ ತನ್ನ ಅನುಭವವನ್ನು, ಜ್ಞಾನವನ್ನು ಬೆಳಿಸಿಕೊಳ್ಳುವ ಹೋರಾಟ ನಡೆಯಿಸಿ ತಾನೂ ಮೇಲಕ್ಕೇರಬಲ್ಲೆನೆಂಬ ಆತ್ಮಜಾಗ್ರತಿ ಆತನಲ್ಲಿ ಬೇಕಷ್ಟೇ. ಸಾಲೆಯ ಮಾಸ್ತರರ ವರ್ಗದಲ್ಲಿಯೇ ಮಿರಜಿ ಅಣ್ಣಾರಾಯ ರಂತಹರೂ ಇರುವಾಗ ಮಾಸ್ತರನ ಅಲ್ಪತಾಭ್ರಾಂತಿ (Inferiority Complex)ಗೆ ಕಾರಣ ಉಳಿಯುವದಿಲ್ಲ. ಆದರೂ ಒಡನೆಯೇ ಕನ್ನಡ ಶಾಲಾ ಶಿಕ್ಷಕರಲ್ಲಿ ಅಣ್ಣಾರಾಯರಂತಹರ ಪ್ರಮಾಣವೆಷ್ಟು? ಎಂಬ ಪ್ರಶ್ನೆಯೂ ನಮ್ಮ ಮನದಲ್ಲಿ ಸುಳಿಯುತ್ತಿದೆ. ಈ ಪ್ರಶ್ನೆಗೆ ಉತ್ತರವನ್ನೀಯಲು ಶಿಕ್ಷಕರು ಮುಂದೆ ಬರುವುದಾದರೆ ಈ ಕೃತಿಯೂ ಸಾರ್ಥಕವಾದೀತು.

ಹಳ್ಳಿಯ ಸಾಲೆಯ ಮಾಸ್ತರನು ಕಾದಂಬರಿಯ ನಾಯಕ ಪಟ್ಟವನ್ನು ಎರಡನೆಯ ಸಲ ಏರಿದುದಕ್ಕೆ ಶಿಕ್ಷಕರು—ವಿಶೇಷತಃ ಉತ್ತರ ಕರ್ನಾಟಕ ದವರು—ಹೆಮ್ಮೆಪಟ್ಟುಕೊಳ್ಳಬಹುದು. ತಮ್ಮ ಜೀವನದ, ಅನುಭವದ ತಿರುಳಿನಂತಿರುವ ಈ ಕಾದಂಬರಿಯನ್ನು ಅವರು ಮೆಚ್ಚಿಕೊಳ್ಳಬಲ್ಲರು. ಇತರರಿಗೂ ಈ ಅನುಭವದಿಂದ ಮೆಚ್ಚುಗೆಯೂದೀತು. 'ರಾಮಣ್ಣ ಮಾಸ್ತರು' ಕಾದಂಬರಿ ಹಳ್ಳಿಯ ಸಾಲೆಯ ಮಾಸ್ತರರ ಒಂದು ಚಿಕ್ಕ 'ಮಹಾಕಾವ್ಯ'.

# ಮಿರ್ಜಿಯವರ ಮೂರು ಕಾದಂಬರಿಗಳು

ಶ್ರೀ. ಟಿ. ಕೆ. ಪಾಟೀಲ, ಬಿ.ಎ., ಬಿ.ಟಿ., ಜಮಖಂಡಿ.

ಕನ್ನಡ ನಾಡಿನ ಸುಪ್ರಸಿದ್ಧ ಕವಿಗಳೂ ವಿಮರ್ಶಕರೂ ಆದ ಪ್ರೊ. ವ್ಹಿ. ಸೀತಾರಾಮಯ್ಯನವರು ಮಿರ್ಜಿ ಅಣ್ಣಾರಾಯರ 'ರಾಷ್ಟ್ರ-ಪುರುಷ' ಎಂಬ ರಾಜಕೀಯ ಕಾದಂಬರಿಯನ್ನು ವಿಮರ್ಶಿಸುತ್ತ ಹೀಗೆ ನುಡಿದರು: "ಈ ಕ್ಷೇತ್ರದಲ್ಲಿ—ಇದೇ ಹಿನ್ನೆಲೆ ಹಾಗೂ ರೀತಿಗಳಲ್ಲಿ—ಈ ಮೊದಲೇ ಕೆಲವು ಲೇಖಕರಿಂದ ಒಳ್ಳೆಯದಾಗಿಯೋ ಅಪೂರ್ಣವಾಗಿಯೋ ಕೃತಿ ನಿರ್ಮಿಸಲ್ಪಟ್ಟಿವೆ. ಆದರೆ ಇಲ್ಲಿಯ ಪ್ರಸಂಗಗಳಲ್ಲಿಯ ವ್ಯಕ್ತಿಗಳ ಹುಮ್ಮಸ್ಸು ಮತ್ತು ಜೋಕುಗಳು ಮಿ. ಮಿರ್ಜಿಯವರ ಸ್ವಂತದ್ದೇ ಆಗಿವೆ. ಹಳ್ಳಿಯ ಜೀವನ ಹಾಗೂ ಮುಂಬಯಿ ಜೀವನಗಳ ಚಿತ್ರವು ಸ್ವಾಭಾವಿಕವಾಗಿ ಬಂದಿದೆ."* ಇಂಥ ಹಿರಿಯರೆಲ್ಲ ಅಣ್ಣಾರಾಯರ ರಾಜಕೀಯ ಕಾದಂಬರಿಗಳನ್ನು ಕುತೂಹಲದಿಂದ ಸ್ವಾಗತಿಸಿದುದರಿಂದ ಒಂದಾದ ನಂತರ ಒಂದರಂತೆ ಮತ್ತೆ ಮೂರು ರಾಜಕೀಯ ಕಾದಂಬರಿಗಳನ್ನು ಮಿರ್ಜಿಯವರು ಕನ್ನಡ ಸಾಹಿತ್ಯಪ್ರಪಂಚಕ್ಕೆ ನೀಡಿದರು. ಅವು ಪ್ರತಿಸರಕಾರ, ಭಸ್ಮಾಸುರ, ಸಮ್ರಾಟ್ ಶ್ರೇಣಿಕಗಳೆಂದು ಪ್ರಸಿದ್ಧವಾಗಿವೆ. ಈ ಮೂರೂ ಕಿರುಕಾದಂಬರಿಗಳಿಗೆ ರಾಜಕೀಯ ಹಿನ್ನೆಲೆಯುಂಟು. ಇಷ್ಟೇ ಅಲ್ಲ, ರಾಜಕೀಯ ಪ್ರಸಂಗಗಳನ್ನೇ ವಸ್ತುವಾಗಿ ಇಟ್ಟುಕೊಂಡು ಬರೆದವುಗಳಾಗಿವೆ. ಇವುಗಳಲ್ಲಿ ಮೊದಲಿನವೆರಡು ಭಾರತದ ಈ ಶತಮಾನದ ರಾಜಕೀಯ ಜೀವನಕ್ಕೆ ಸಂಬಂಧಿಸಿದ್ದರೆ 'ಸಮ್ರಾಟ್ ಶ್ರೇಣಿಕ' ಎರಡೂವರೆ ಸಾವಿರ ವರ್ಷಗಳ ಹಿಂದಿನ ರಾಜಕೀಯ ಜೀವನವನ್ನು ಚಿತ್ರಿಸುತ್ತದೆ. ಅದರಿಂದ ಈ ಮೂರೂ ಕೃತಿಗಳನ್ನು ಕೂಡಿಯೇ ಪರಿಚಯ ಮಾಡಿಕೊಡಲು ಇಲ್ಲಿ ಯತ್ನಿಸಲಾಗಿದೆ.

---

*Much of this field—in background and process—has already been treated, well or ill, by other writers. But the stress and drive of personality behind things here is Mr. Mirji's own. Life in the villages and in Bombay is truly rendered.

—V. SITARAMIAH.

—*The Indian P. E. N. April 1948.*

‘ಪ್ರತಿಸರಕಾರ’ವನ್ನು ಪ್ರಕಟಿಸುತ್ತ ಧಾರವಾಡದ ಲಲಿತ ಸಾಹಿತ್ಯ ಮಾಲೆಯವರು “ಅಗಸ್ಟ ೧೯೪೨ರ ನಂತರ ಸಾತಾರೆ ಜಿಲ್ಹೆಯಲ್ಲಿ ನಡೆದ ಸ್ವಾತಂತ್ರ್ಯಯುದ್ಧದ ವಿಶಿಷ್ಟ ಚಳುವಳಿಯನ್ನು ನಿರೂಪಿಸುವ ಸ್ವಾರಸ್ಯಪೂರ್ಣವಾದ ಕಥಾನಕ, ಈ ಕೃತಿ. ಆ ಸುತ್ತಿನ ನಾಡಿಗೆ ಪ್ರತಿಸರಕಾರವನ್ನೇ ಸ್ಥಾಪಿಸಿ ಆಡಳಿತ ನಡೆಸಿದ ಕಾರಣದಿಂದ ಈ ಹೋರಾಟ ‘ಪ್ರತಿಸರಕಾರ’ದ ಹೋರಾಟವೆಂದು ಪ್ರಸಿದ್ಧವಾಯಿತು. ಈ ಹೋರಾಟದ ವಿರೋಧಿಗಳ ಕಾಲಿಗೆ ಪತ್ರೆ ಬಡೆಯುವ ಶಿಕ್ಷೆಯನ್ನು ಪ್ರತಿಸರಕಾರದವರು ಅನುಸರಿಸಿದ ಕಾರಣದಿಂದ ಈ ಹೋರಾಟಕ್ಕೆ ‘ಪ್ರತಿಸರಕಾರ’ದ ಹೋರಾಟವೆಂದೂ ಕರೆದರು . . . . ಈ ಹೋರಾಟವನ್ನು ಒಂದು ವಿಶಿಷ್ಟ ಕಥನತಂತ್ರದಿಂದ ಹೆಣೆದು ಶ್ರೀ ಮಿರ್ಜಿ ಅಣ್ಣಾರಾಯರು ಈ ಕಾದಂಬರಿಯನ್ನು ರಚಿಸಿದ್ದಾರೆ” ಎಂದು ‘ಅರಿಕೆ’ ಮಾಡಿಕೊಂಡಿದ್ದಾರೆ. ನಿಜವಾಗಿಯೂ ಅವರು ಹೇಳುವಂತೆ ಈ ಕಾದಂಬರಿಯ ತಂತ್ರವು ಕನ್ನಡ ಸಾಹಿತ್ಯಪ್ರಪಂಚಕ್ಕೇನೇ ಹೊಸದಾಗಿದೆ. ಒಂದೇ ಒಂದು ದಿನದಲ್ಲಿ—ಬೆಳಗಿನಲ್ಲಿ ಆರಂಭವಾದ ಕಥೆ ಸಾಯಂಕಾಲಕ್ಕೆ ಮುಗಿಯುತ್ತದೆ. ಆದರೆ ಅದು ಚಿತ್ರಿಸುವ ಕಥಾನಕದ ಕಾಲಾವಧಿಯು ಸುಮಾರು ಮೂರು ವರ್ಷಗಳದ್ದಾಗುತ್ತದೆ. ಮನಸ್ಸಿನ ವಿಚಾರತರಂಗ, ದಿನಚರಿಯ ಪುಟಗಳು, ಪತ್ರಗಳು ಇವೆಲ್ಲ ಸಾಹಿತ್ಯಪ್ರಕಾರಗಳನ್ನು ಉಪಯೋಗಿಸಿ, ಇಲ್ಲಿಯ ಕಥೆಯನ್ನು ಹೆಣೆಯಲಾಗಿದೆ. ಬಹು ಕುತೂಹಲಕಾರಿಯಾಗಿ ಕಥೆ ಮುಂದುವರಿದಿದೆ. ಇದು ಜನಾಂಗದಲ್ಲೆದ್ದ ಕ್ರಾಂತಿಯನ್ನು ಚಿತ್ರಿಸುವ ಕೃತಿಯಾದರೂ ಪಾತ್ರಸೃಷ್ಟಿಯಲ್ಲಿ ಲೇಖಕರು ತಮ್ಮ ಕೌಶಲ್ಯವನ್ನು ವ್ಯಕ್ತಪಡಿಸದೆ ಇಲ್ಲ. ಇದನ್ನೆಲ್ಲ ವಿಮರ್ಶಿಸುತ್ತ ಬೆಂಗಳೂರಿನ ‘ಸುಬೋಧ’ವು “ಶ್ರೀಮಾನ್ ಅಣ್ಣಾರಾಯರ ಲೇಖನಿ ಈ ಬಗೆಯ ಸ್ವತಂತ್ರ ಕಾದಂಬರೀ ಲೇಖನಕ್ಕೆ ಚೆನ್ನಾಗಿ ಅನುಭವಗೊಂಡು ಪಳಗಿದೆ . . . ಇವರ ಈ ರಚನೆಯು ಶ್ಲಾಘ್ಯವಾಗಿದೆ”* ಎಂದು ಉಸುರಿದೆ. ಇದೊಂದು ಉದ್ವೇಗಪೂರ್ಣ ಪರಿಸ್ಥಿತಿಯನ್ನು ಚಿತ್ರಿಸುವ ಕಲಾಕೃತಿಯಾಗಿದೆ.

ಭಾರತೀಯರ ಜೀವನದಲ್ಲಿ, ಇಂಥದೇ ಉದ್ವೇಗಪೂರ್ಣವಾದ ಪ್ರಸಂಗವು ಮಹಾತ್ಮಾ ಗಾಂಧೀಜಿಯವರ ಕೊಲೆಯ ತರುವಾಯ ಉದ್ಭವಿಸಿತು. ಆಗ ಜನತೆ ಮನೆಹಿರಿಯನನ್ನು ಕಳೆದುಕೊಂಡ ಮಕ್ಕಳಂತೆ ದಿಕ್ಕು

* ಸುಬೋಧ ಮೇ ೧೯೪೮.

ಗಾಣದಾಯಿತು. ದುಃಖ, ದುಮ್ಮಾನ, ದುಗುಡ ಅದರೊಡನೆಯೇ ತ್ವೇಷ, ಕ್ರೋಧ, ಆವೇಶಗಳೂ ಜನರ ಹೃದಯದಲ್ಲಿ ಭುಗಿಲ್ಲೆಂದು ಎದ್ದುವು. ಆಗ ಜನ ಬಿರುಗಾಳಿಗೆ ಸಿಕ್ಕ ತರಗೆಲೆಯಂತೆ ಆಗಿದ್ದಿತು. ಸುತ್ತಿದಂತೆ ಸುಳಿಯು ವುದು. ಎಳೆದತ್ತ ಜೋಲಿಹೊಡೆಯುತ್ತ ಹೋಗುವುದು. ಇಂಥ ಉಲ್ಬ ಣಾವಸ್ಥೆಯ ಲಾಭವನ್ನು ನಾಡಿನೊಳಗಿನ ಕೆಲವು ಪುಂಡರು ತಕ್ಕೊಂಡು, ಮಹಾತ್ಮರ ಕೊಲೆಯನ್ನೇ ಕಾರಣವನ್ನಾಗಿಟ್ಟುಕೊಂಡು, ಕೆಲವು ಕಡೆಗೆ ಬ್ರಾಹ್ಮಣರ ಮನೆಗಳನ್ನು ಸುಡುವದು, ಸುಲಿಯುವದು, ಇಂಥ ಹೇಯಕೃತ್ಯ ಗಳನ್ನು ಮಾಡಿದರು. ಸ್ವಾರ್ಥ, ವೈಯಕ್ತಿಕ ದ್ವೇಷಗಳನ್ನು ಸಾಧಿಸಿದರು. ಈ ಪರಿಸ್ಥಿತಿಯ ಚಿತ್ರಣವನ್ನು ಶ್ರೀ ಮಿರ್ಜಿ ಅಣ್ಣಾರಾಯರು 'ಭಸ್ಮಾಸುರ' ಕಾದಂಬರಿಯಲ್ಲಿ ಬರೆದಿದ್ದಾರೆ ಪೌರಾಣಿಕ ವ್ಯಕ್ತಿಯಾದ ಭಸ್ಮಾಸುರನು ಶಿವನಿಂದ ವರವನ್ನು ಪಡೆದು, ಲೋಕಕಂಟಕನಾದ ಕಥೆಯನ್ನು ಇಲ್ಲಿ ರೂಪಕ ದಂತೆ ಬಹಳ ಚತುರತೆಯಿಂದ ಲೇಖಕರು ಬಳಸಿಕೊಂಡಿದ್ದಾರೆ. ಅಧಮುರ್ಥ ಕಾಂಗ್ರೆಸಿಗರು, ಸ್ವಾತಂತ್ರ್ಯವನ್ನು ಸಂಪಾದಿಸಿದ ವೀರರೆಂದು ತಾವು ಭಾವಿಸಿ, ಜನತೆಯಲ್ಲಿಯ ಗಾಂಧಿನಿಷ್ಠೆಯ ದುರುಪಯೋಗ ಮಾಡಿಕೊಂಡು ಭಸ್ಮಾಸುರ ನಂತೆ ವರ್ತಿಸಿದರು. ಇದರ ಸುಂದರ ಕಥೆಯೇ ಇಲ್ಲಿದೆ. ಇದನ್ನು ವಿಮರ್ಶ ಕರು 'ಒಂದು ನೀಳ್ಗತೆ'ಯಂತಿದೆ ಎಂದು ಹೇಳಿ, ಸದ್ಯಕ್ಕಿನ ನಾಡಿನ ಸಾರ್ವ ಜನಿಕ ಜೀವನವನ್ನೂ ರಾಜಕೀಯ ಪ್ರಸಂಗವನ್ನೂ ಒಡಮೂಡಿಸುವ ಕೃತಿ ಯೆಂದಿರುವರು.* 'ಭಸ್ಮಾಸುರ'ವೊಂದು ಸಂದರ್ಭಚಿತ್ರವನ್ನು ಕೊಡುವ ಸುಂದರ ಕೃತಿಯಾಗಿದೆಯೆನ್ನಲಡ್ಡಿಯಿಲ್ಲ.

ಇನ್ನು ಮೂರನೆಯದಾದ 'ಸಮ್ರಾಟ್ ಶ್ರೇಣಿಕ'ವೆಂಬ ಕಾದಂಬರಿಯು ಐತಹಾಸಿಕವಾದರೂ ಭಾರತದ ಇಪ್ಪತ್ತೈದು ನೂರು ವರ್ಷಗಳ ಹಿಂದಿನ

---

*The theme of BHASMASURA, a short-long story or a novelette by Mirji Anna Rao of North Karnatak, the author of several similar efforts, is political and topical. It depicts the present state of public life in the interior of the country. . . . The work is didactic, drawing attention to current abuses, and mirroring the gropings after better things by the thinking part of soeiety. —M. A. VENKATA RAO.

—*The Indian P. E. N. February 1950.*

ರಾಜಕೀಯ ಸ್ಥಿತಿಯನ್ನು ಚಿತ್ರಿಸುತ್ತದೆ. ವೈಶಾಲಿಯ ಗಣರಾಜ್ಯ ಸಂಘದ ನಾಯಕ ಚೇಟಕ, ಅಂದಿನ ಪ್ರಜಾಪ್ರಭುತ್ವದ ಪ್ರತಿನಿಧಿ. ಮಗಧದ ಸಮ್ರಾಟ್, ಬಿಂಬಿಸಾರ (ಶ್ರೇಣಿಕ) ಸಾಮ್ರಾಜ್ಯವಾದದ ಪ್ರತಿನಿಧಿ. ಒಬ್ಬ ಜೈನ, ಇನ್ನೊಬ್ಬ ಬೌದ್ಧ. ಇಬ್ಬರಲ್ಲಿಯೂ ರಾಜಕೀಯ ಹಾಗೂ ಧಾರ್ಮಿಕ ಸಂಘರ್ಷ. ಇಂಥದರಲ್ಲಿ ಚೇಟಕ ಪುತ್ರಿ ಚೇಳನಾ ಹಾಗೂ ಬಿಂಬಿಸಾರರಲ್ಲಿ ಪ್ರಣಯ, ಪ್ರೇಮಗಳ ಸಂವರ್ಧನೆ. ಚೇಳನಾದೇವಿಯ ಅಪಹರಣ. ರಾಜ ಗೃಹದ ಮೇಲೆ ಗಣರಾಜರ ದಾಳಿ . . . ಬಿಂಬಿಸಾರನ ಧರ್ಮಾಂತರಗಳೆಲ್ಲ ಈ ಕಾದಂಬರಿಯಲ್ಲಿ ಸುಂದರವಾಗಿ ಹೆಣೆಯಲ್ಪಟ್ಟಿವೆ. ಕಥನ ತಂತ್ರವು ಕನ್ನಡ ಕಾದಂಬರಿ ಪ್ರಪಂಚಕ್ಕೆ ಹೊಸ ಮಾದರಿಯದು. 'ಪಟ್ಟದರಸಿಯ ಪತ್ರಗಳು', 'ಸುಜೇಷ್ಠಾ ಹೇಳಿದ ಕತೆ', 'ಮಹಾವೀರನ ಮಾತುಗಳು', 'ಚೇಳನಾ ದೇವಿಯ ಚತುರೋಕ್ತಿಗಳಿಂದ' ಎಂಬ ನಾಲ್ಕು ವಿಭಾಗಗಳಲ್ಲಿ ನಾಲ್ಕು ವಿಧ ಕಥನ ಕ್ರಮಗಳನ್ನು ಅನುಸರಿಸಿ ಕಾದಂಬರಿಯ ಕಥೆಯನ್ನು ರೂಪಿಸಲಾಗಿದೆ. ಪ್ರಾಚೀನ ಕಾಲದ ಭಾರತೀಯ ಜೀವನ, ಪ್ರಾದೇಶಿಕ ಪರಿಚಯಗಳನ್ನು ಯಥಾವತ್ತಾಗಿ ಇದರಲ್ಲಿ ಲೇಖಕರು ಮೂಡಿಸಿದ್ದಾರೆ. ಇವರು ಉತ್ತರ ಹಿಂದುಸ್ಥಾನದಲ್ಲಿ ಸಂಚರಿಸುವಾಗ ಆಯಾ ಐತಿಹಾಸಿಕ ಸ್ಥಳಗಳನ್ನು ಸಂದರ್ಶಿಸಿ, ನಿರೀಕ್ಷಿಸಿ ಬಂದುದರಿಂದ ಇಲ್ಲಿಯ ವರ್ಣನೆಗಳು ಸತ್ಯವಾಗಿದ್ದು, ಸತ್ವಪೂರ್ಣವಾಗಿವೆ. 'ಭಾರತ-ಜ್ಯೋತಿ'ಯಲ್ಲಿ ಶ್ರೀ. ಎಮ್. ವ್ಹಿ. ಕಾಮತರು 'ಇತ್ತೀಚಿನ ಕನ್ನಡ ಕಾದಂಬರಿ'ಗಳನ್ನು ಕುರಿತು, ಬರೆಯುತ್ತ ಮಿರ್ಜಿ ಅಣ್ಣಾ ರಾಯರ ಕೃತಿಗಳ ವಿಷಯದಲ್ಲಿ ಇಂತು ನುಡಿದಿದ್ದಾರೆ:—"ನಲವತ್ತನೆಯ ಇಸ್ವಿಯ ನಂತರದ ವರ್ಷಗಳು ಹೆಸರಾದ ಮಿರ್ಜಿ ಅಣ್ಣಾರಾಯರ ಕೃತಿಗಳಿಂದ ಕೂಡಿವೆ. ಅವರು ಕರ್ನಾಟಕದ ಜೈನರ ಜೀವನದ ಮೇಲೆ ಚಿತ್ರಿಸಿದ—ಬಹುಮಾನ ಪಡೆದ—'ನಿಸರ್ಗ'ವೆಂಬ ಕಾದಂಬರಿಯಿಂದ ಘನತೆಗೆ ಬಂದರು. 'ನಿಸರ್ಗ'ವು ಒಂದು ಭಗ್ನ ಪ್ರೇಮದ ಕಥೆಯು. ಶ್ರೀ ಶಿವರಾಮ ಕಾರಂತ ರಂತೆ ಮಿರ್ಜಿ ಅಣ್ಣಾರಾಯರೂ ಶಾಲೆಯ ಗುರುಗಳನ್ನು ಅಭ್ಯಾಸಿಸಿ, 'ರಾಮಣ್ಣ ಮಾಸ್ತರು' ಎಂಬ ಕೃತಿಯನ್ನು ಬರೆದಿದ್ದಾರೆ. ಅವರು 'ಪ್ರತಿಸರಕಾರ'ದಲ್ಲಿ ೧೯೪೨ನೇ ಇಸ್ವಿಯ ಸಾತಾರಾ ಜಿಲ್ಹೆಯ ಕ್ರಾಂತಿಯ ಉಲ್ಬಣವನ್ನು ತಿಳಕೊಂಡು ಬರೆದದ್ದುಂಟು. ಆದರೆ ಅವರ 'ಅಶೋಕ ಚಕ್ರ'ವು ತಾತ್ಕಾಲಿಕ ಪರಿಸ್ಥಿತಿಯ ಸರ್ವೋತ್ಕೃಷ್ಟ ಅಭ್ಯಾಸವಾಗಿದೆ. ಅದು ತತ್‌ಕಾಲಿನ ಬೇಸಾಯಗಾರನ

ಒಂದು ದುರಂತ ಕಥೆಯಾಗಿದ್ದು, ಅದರ ಹಿನ್ನೆಲೆಯು ಗ್ರಾಮಾಂತರದಲ್ಲಿ ವಾಸಿಸುವ ಜನರ ಸಾಲಗಾರಿಕೆಯಾಗಿದೆ."* ಅಣ್ಣಾರಾಯರ ಕಾದಂಬರಿಗಳನ್ನು ಕುರಿತು, ವಿಮರ್ಶಕರ ಇಂಥ ಪರಿಚಯಾತ್ಮಕ ಸಾಹಿತ್ಯದ ಲೇಖನಗಳಲ್ಲಿ ಈ ಹಿನ್ನೋಟವಿದೆ, ಇತಿಹಾಸವಿದೆ. ಅದರ ಮುಂದಿನ ಕಾಲದ ಕನ್ನಡ ಕಾದಂಬರಿಗಳ ವಿಕಾಸದ ಚರಿತ್ರೆಯಲ್ಲಿ 'ಭಸ್ಮಾಸುರ', 'ಸಮ್ರಾಟ್ ಶ್ರೇಣಿಕ', 'ಶ್ರೇಯಾಂಸ'ಗಳು ಗಣ್ಯವಾದ ಸ್ಥಾನವನ್ನು ಪಡೆಯುತ್ತವೆ. ಮಿರ್ಜಿ ಅಣ್ಣಾರಾಯರ ಸಾಹಿತ್ಯನಿರ್ಮಿತಿಯು ವಿಷಯದಲ್ಲಿ ಕನ್ನಡ ಜನತೆಯು ಇಟ್ಟುಕೊಂಡ ಆಶೆಯನ್ನು ಸಫಲಗೊಳಿಸುತ್ತವೆ, ಸಾರ್ಥಕಗೊಳಿಸಿವೆ.

---

* An other writer to chronicle the early forties is Mirji Anna Rao, an author of great distinction. He shot into prominence by his prize-winning novel of Jain life in Karnatak called NISARGA, which is a story of frustrated love. Mirji Anna Rao too, like Karanth, has tried to describe a village school Master's life and his RAMANNA MASTARU is an unique study by itself. In PRATI SARAKAR, Anna Rao studies the Satara revolutionary upsurge of 1942, but his best contemporary study is ASOKA-CHAKRA, which tells the tragic story of an agriculturist against the given and serbid back-ground of rural indebtedness.

—M. V. KAMATH.

*—Bharat Jyoti 24th Oct. 1948.*

# ಶ್ರೇಯಾಂಸ

ಶ್ರೀ. ಜಿ. ಬೃಹ್ಮಪ್ಪ, ಎಂ. ಎ. ಶಿವಮೊಗ್ಗ.

ಮಿರ್ಜಿ ಅಣ್ಣಾರಾಯರು ಇಂದಿನ ಕಾದಂಬರಿಕಾರರಲ್ಲಿ ಹೆಸರಾಂತವರು. ಸಾಮಾಜಿಕ ವಸ್ತುಗಳನ್ನು ಆರಿಸಿಕೊಂಡು, ಹೃದಯಂಗಮವಾಗಿ ಕಾದಂಬರಿಗಳನ್ನು ಇವರು ರಚಿಸಿದ್ದಾರೆ. ಪ್ರತಿಕೂಲ ದಾಂಪತ್ಯದ ಪರಿಣಾಮವನ್ನು 'ನಿಸರ್ಗ'ದಲ್ಲಿ ಮನಮುಟ್ಟುವಂತೆ ಚಿತ್ರಿಸಿದ್ದಾರೆ. ಗಂಡು–ಹೆಣ್ಣಿನ ಸಂಬಂಧದ ಮೇಲೆ ಇವರು ಬೀರುವ ನೋಟದಲ್ಲಿ ಕಂದಾಚಾರದ ಕರ್ಕಶವಿಲ್ಲ; ಬದಲಾಗಿ ಕವಿಸಹಜವಾದ ಅನುಕಂಪವಿದೆ. ಇವರ 'ಅಶೋಕ ಚಕ್ರ'ದಲ್ಲಿ ಸ್ವಬುದ್ಧಿಯಿಲ್ಲದ ಮತ್ತು ಹೇಳಿದ ಮಾತನ್ನು ಕೇಳದ ಕಥಾನಾಯಕನ ವಿವರ ಚಿತ್ರ ಬಂದಿದೆ; ಅಂಥವನನ್ನು ಕೈಹಿಡಿದ ಸಾಧ್ವೀಮಣಿ ಪಟ್ಟ ಪಾಡಿನ ಸಮಗ್ರ ಚಿತ್ರ ಮೂಡಿ ನಿಂತಿದೆ. ಹಾಳಾಗುವ ಸಂಸಾರವನ್ನು ಉಳಿಸದೆ, ಇನ್ನೂ ಜಾಗ್ರತೆ ಹಾಳಾಗುವಂತೆ ಸದಾ ಹಂಬಲಿಸುವ ಸಮಾಜದ್ರೋಹಿಗಳ, ಸ್ವಾರ್ಥಪರರ ಪಾತ್ರಗಳನ್ನೂ ಪರಿಣಾಮಕಾರಿಯಾಗಿ ಬಿಡಿಸಿದ್ದಾರೆ. ಈಗ "ಶ್ರೇಯಾಂಸ"ನತ್ತ ಹೊರಳೋಣ.

"ಶ್ರೇಯಾಂಸ" ಸಾಮಾಜಿಕ ಕಾದಂಬರಿ. ಜೈನ ಸಮಾಜದ ಹುಲುಸು ಹಾಗೂ ಹೊಲಸನ್ನೆಲ್ಲ ಇಲ್ಲಿ ಕಾಣಬಹುದು. ನಾನಾ ಮನೋವೃತ್ತಿಯ ಪಾತ್ರಗಳನ್ನು ಶ್ರೀ ಮಿರ್ಜಿಯವರು ಸರ್ವಾಂಗಸುಂದರವಾಗಿ ಚಿತ್ರಿಸಿದ್ದಾರೆ. ಬಾಳಪ್ಪ ರೈತ; ಭೂದೇವಿಯನ್ನು ನಂಬಿ ಬಾಳಿದವ. ತನ್ನ ಹಳ್ಳಿಯಿಂದ ಹೊರಗಿನ ಜಗತ್ತಿನ ಅನುಭವ ಆತನಿಗೆ ಅಷ್ಟಾಗಿಲ್ಲ. ದುಡಿದು ತಿನ್ನಬೇಕು, ಬೆವರು ಸುರಿಸಿ ಬಾಳಬೇಕು; ನೇಗಿಲ ಯೋಗಿಯಾಗಿ ಹುಟ್ಟಿ, ನೇಗಿಲ ಯೋಗಿಯಾಗಿಯೆ ಸತ್ತರೆ ಸಾಕು. ಇದೇ ಬಾಳಪ್ಪನ ಮನೋಧರ್ಮ. ಯಾರಿಗೂ ಅಹಿತವನ್ನು ಬಯಸದೆ ಬದುಕಿದ ಜೀವ ಬಾಳಪ್ಪನದು; ಈತನ ಮಡದಿ ಸರಸವ್ವ. ಪತಿಗನುಕೂಲವಾಗಿ ಬಾಳಿದ ಸತೀಮಣಿ. ಇವರ ಜೊತೆಯಾಗಿ ಬಾಳಿದವರು ಸುಂದರವ್ವ ಮತ್ತು ಪದ್ಮಪ್ಪ. ಇಹಕ್ಕಿಂತ ಪರದ ಕಡೆಗೆ ಹೆಚ್ಚು ಗಮನ ಪದ್ಮಪ್ಪನಿಗೆ. ಸುಂದರವ್ವನ ಮನೋಧರ್ಮ ದೇವರ ಕಡೆಯಿದ್ದರೂ, ಮಾನವ ಸಹಜವಾದ ಮೋಹವೂ ಅದರಲ್ಲಿ ಸಮರಸವಾಗಿ ಬೆರೆತಿದೆ. ಹೇಗೋ ಇವರಿಬ್ಬರಿಗೂ ದೇವರು ಗಂಟುಹಾಕಿದ್ದಾನೆ. ಸುಂದರವ್ವ

ಎಂದೂ ಪದ್ಮಪ್ಪನ ಹಾದಿಯಲ್ಲಿ ಅಡ್ಡಬರಲಿಲ್ಲ. ಬಾಳಪ್ಪನ ಏಕಮಾತ್ರ ಪುತ್ರ ಶ್ರೇಯಾಂಸ. ಸುಂದರವ್ವರ ಅಚ್ಚುಮೆಚ್ಚಿನ ಸೋದರಳಿಯ ಈತ. ಎಲ್ಲರೂ ಅಪಾರ ಪ್ರೇಮವನ್ನು ತೋರಿ ಶ್ರೇಯಾಂಸನನ್ನು ಸಾಕಿ ಸಲಹುವರು.

ಶ್ರೇಯಾಂಸನ ಗಮನ ಹೊಲದತ್ತ ಹೊರಳಲಿಲ್ಲ. ಆತನ ಕೈಯು ನೇಗಿಲ ಹಿಡಿಯಲು ಎಂದೂ ಒಡಂಬಡಲಿಲ್ಲ. ಬಾಳಪ್ಪ ಸರಸವ್ವರ ದೃಷ್ಟಿ ದುಡಿದು, ತಿಂದುಂಡು, ಯಾವ ಜೀವಕ್ಕೂ ನೋವು ಕೊಡದೆ ಬಾಳಿದರೆ ಸಾಕೆಂದು. ಆದರೆ ಶ್ರೇಯಾಂಸ ಲೋಕದ ನಾನಾ ಮನೋದೌರ್ಬಲ್ಯಗಳನ್ನು ಕಂಡು, ಅದನ್ನು ನಿವಾರಿಸಬೇಕೆಂದು ಸದಾ ಚಡಪಡಿಸುವನು. ಸಾಹಿತ್ಯ, ಕಲೆ, ಸಮಾಜ ಸುಧಾರಣೆ ಇವನ್ನು ತಲೆಯಲ್ಲಿ ಹಾಕಿಕೊಂಡು, ನಿರಂತರ ಕುದಿಯುವುದು ಶ್ರೇಯಾಂಸನ ಕರುಣಾಪೂರಿತ ಹೃದಯ.

ಲೋಕವನ್ನು ಸುಧಾರಿಸುವಂತಹ ವಿದ್ಯೆಗಾಗಿ ಈತ ನಿರಂತರ ತೊಳಲಿದ. ಆತ್ಮಾರಾಮರಂತಹ ಸದ್ಗುರು ಶ್ರೇಯಾಂಸನನ್ನು ಒಂದು ಮೂರ್ತಿಯನ್ನಾಗಿ ಮಾಡಿ, ಅದರಲ್ಲಿ ತನ್ನ ಸರ್ವಸ್ವವನ್ನೂ ತುಂಬಿ ತಣಿದರು. ಮಗ ಓದಿ ಪರದಾಡುವುದಕ್ಕಿಂತ ತಮ್ಮೆದುರು ನಲಿದಾಡಿಕೊಂಡಿರಲೆಂದು ಬಾಳಪ್ಪನ ಆಶಯ. ಪ್ರತಿಕೂಲ ವಾತಾವರಣಕ್ಕೆ ಸಿಕ್ಕದೆ, ಶ್ರೇಯಾಂಸನಲ್ಲಿ ಅಗೋಚರವಾಗಿ, ಅದ್ಭುತ ಶಕ್ತಿಗಳ ಸಂಚಯವಾಯಿತು. ಇದ್ದ ಅನುಕೂಲಗಳಿಂದಲೇ ಎಷ್ಟು ಜ್ಞಾನವನ್ನು ಗಳಿಸಬಹುದಾಗಿತ್ತೋ, ಅಷ್ಟನ್ನೂ ಗಳಿಸಿದ. ಶ್ರದ್ಧೆ ಹಿರಿದಾದರೆ, ಇದ್ದುದರಲ್ಲಿಯೇ ದೊಡ್ಡವನಾಗಬಹುದೆಂಬುದಕ್ಕೆ ಶ್ರೇಯಾಂಸನೇ ಸಾಕ್ಷಿ. ಏಕಲವ್ಯನಂತೆ, ಶ್ರದ್ಧಾಜೀವಿಯಾಗಿ ಮುಂದಕ್ಕೆ ಬಂದವನು ಶ್ರೇಯಾಂಸ. ಇವನ ಮನೋಧರ್ಮ ಕ್ರಾಂತಿಕಾರಿಯಾದುದು. ಆದರೂ ಎಡರುಗಳನ್ನು ಕಿತ್ತೊಗೆಯುವ ಮನೋದಾರ್ಢ್ಯ ಈತನಲ್ಲಿ ಅಷ್ಟಾಗಿಲ್ಲ. ಆದರೆ ಎಂದೂ ತನಗೊಪ್ಪದ ಕಂದಾಚಾರಕ್ಕೆ ಅಂಟಿ ಬಾಳಿದವನಲ್ಲ. ಈತನಲ್ಲಿ ಕಾರ್ಯದಕ್ಷತೆ ತುಂಬಿ ತುಳುಕಿದರೂ, ಕಾರ್ಯವಿಚಕ್ಷಣತೆಯಿಲ್ಲ. ಶ್ರೇಯಾಂಸನದು ಭಾವಪ್ರಪಂಚ. ರಸಲೋಕದಲ್ಲಿ ಸದಾ ವಿಹರಿಸುತ್ತ, ಅಲ್ಲಿ ತನಗೆ ಸರಿಕಂಡಂತೆ ಭವ್ಯ ಸೌಧಗಳನ್ನು ಕಟ್ಟಿಕೊಳ್ಳುತ್ತಿದ್ದ. ವಾಸ್ತವಿಕ ಲೋಕದ ಅನುಭವ ಈತನಿಗೆ ಸಾಲದು. ಈತನ ಸರಳ ಮನೋಧರ್ಮವನ್ನು ಕಂಡು, ಜನರು ಸುಲಭವಾಗಿ ಈತನಿಗೆ ದ್ರೋಹವೆಸಗಿದರು. ಭಾವೋದ್ರೇಕದಿಂದ ಕಾರ್ಯತತ್ಪರನಾಗುತ್ತಿದ್ದ ಈತನಿಗೆ ಕಲಾವತಿಯಾಗಲಿ, ಲಲಿತೆ

ಯಾಗಲಿ ಹೇಳುತ್ತಿದ್ದ ಹಿತವಚನ ಹಾಗೂ ತೋರುತ್ತಿದ್ದ ಮಾರ್ಗದರ್ಶನ ಈತನ ಗಮನಕ್ಕೇ ಬೀಳುತ್ತಿರಲಿಲ್ಲ. ಒಟ್ಟಿನಲ್ಲಿ ಈ ಭಾವ ಜೀವಕ್ಕೆ ರಕ್ಷಣೆ ಯಾಗಿ ಕಲಾವತಿಯೋ, ಇಲ್ಲವೆ ಲಲಿತೆಯೋ ಸದಾ ಕಾಯುತ್ತಿರಬೇಕು; ರಕ್ಷಣೆಯ ಜೊತೆಗೆ ಸ್ಫೂರ್ತಿಯನ್ನೂ ಇವರು ನೀಡುತ್ತಿರಬೇಕು.

ಶ್ರೇಯಾಂಸನ ಬಾಳು ಲೋಕವನ್ನು ಸರಿಪಡಿಸಲು ಹಾತೊರೆದು ಹೆಣಗಾಡಿತು. ಆದರೆ ಲಕ್ಷ್ಮಿಯನ್ನು ಕಡೆಗಣಿಸಿ, ಮಾಡಬಾರದ ಅನ್ಯಾಯ ವನ್ನು ಆ ಹಳ್ಳಿಯ ಮುದ್ದು ಹುಡುಗಿಗೆ, ಶ್ರೇಯಾಂಸ ಮಾಡಿದ್ದಾನೆ. ಲಕ್ಷ್ಮಿಯ ಮನ ಸದಾ ಶ್ರೇಯಾಂಸನ ಶ್ರೇಯಸ್ಸನ್ನೇ ಬಯಸಿ ಬಾಳಿತು; ಶ್ರೇಯಾಂಸನ ಸಂತಸವೇ ತನ್ನ ಸಂತಸವೆಂದು ತಿಳಿದು ಬಾಳಿದಳು ಲಕ್ಷ್ಮಿ. ಲಕ್ಷ್ಮಿಗೆ ತನ್ನತನವಿಲ್ಲ. ಹಾಗೂ ವ್ಯಕ್ತಿತ್ವವಿಲ್ಲ. ಪಾಲಿಗೆ ಬಂದುದು ಪಂಚಾಮೃತವೆಂದು ಸಹನೆಯಿಂದ ಬಾಳಿದ ಭಾಗ್ಯಲಕ್ಷ್ಮಿ ಈಕೆ. ರಾಮಾ ಯಣದಲ್ಲಿ ಬರುವ ಊರ್ಮಿಳೆಗೆ ಯಾವ ವಿಧದಲ್ಲೂ ಅಣ್ಣಾರಾಯರ ಲಕ್ಷ್ಮಿ ಕೀಳಲ್ಲ. ಇನ್ನೂ ಒಂದು ಕೈ ಮೇಲು! ಪತಿಯನ್ನು ಸಂತೋಷಪಡಿಸು ವುದು ತನ್ನ ಕೈಯಿಂದಾಗಲಿಲ್ಲವೆಂದು ತಿಳಿದ ಈಕೆ, ಕಲಾವತಿಗೆ ತನ್ನ ಪತಿ ದೇವನನ್ನು ಅರ್ಪಿಸಲೂ ಹಿಂಜರಿಯಲಿಲ್ಲ. ಈಕೆಯ ಪ್ರೇಮ ಅಂತರ್ಮುಖ ವಾದುದು. ವಿದ್ಯೆಯಿಲ್ಲದಿದ್ದರೂ ಸುಸಂಸ್ಕೃತಳಾಗಿ ಬಾಳಿದಳು. ಪತಿ ತನಗೊಲಿಯದುದಕ್ಕಾಗಿ ಮನಸ್ಸನ್ನು ಕೆಡಿಸಿಕೊಂಡು ಅಡ್ಡಹಾದಿಗೆ ಬೀಳುವ ಅಸಂಸ್ಕೃತರಂತೆ ಲಕ್ಷ್ಮಿ ಎಂದೂ ದುರಾಲೋಚನೆ ಮಾಡಿಲ್ಲ. ಲಕ್ಷ್ಮಿಯ ಬಾಳಿಗೆ ಬೆಳಕು ಬೀರಬಹುದಾಗಿದ್ದ ಶ್ರೇಯಾಂಸ, ಸ್ವಾರ್ಥಪರನಾಗಿ ಮನೋ ದೌರ್ಬಲ್ಯಕ್ಕೆ ಸಿಕ್ಕಿ ಕಲಾವತಿಯನ್ನು ಕೈಹಿಡಿದ. ಒಂದು ಬಾರಿಯಾದರೂ, ಮನಃಪೂರ್ವಕ ಲಕ್ಷ್ಮಿಯನ್ನು ಈತ ಪ್ರೀತಿಸಲಿಲ್ಲ. ನಿರಾಶಳಾದ ಲಕ್ಷ್ಮಿ ರೊಚ್ಚಿಗೇಳದೆ, ಸಹನೆಯಿಂದ ಸಹಿಸಿ, ಸಂಸಾರಿ ಜೀವಿಗಳಿಗೆ ಹೊಸ ಬೆಳಕನ್ನಿ ತ್ತಿರುವಳು. ಶ್ರೇಯಾಂಸ ಮಾತಾಡಿ ಸಾಧಿಸಿದುದಕ್ಕಿಂತ ಲಕ್ಷ್ಮಿ ಮೌನವಾಗಿ ಪಡೆದ ಸಿದ್ಧಿ ಲೋಕದ ಗಮನಕ್ಕೆ ಬೀಳದಿದ್ದರೇನಂತೆ!

ಕಲಾವತಿ ಹಾಗೂ ಲಲಿತೆಯರ ಮನೋಧರ್ಮದಲ್ಲಿ ಸಾಮ್ಯ ಕಾಣು ವೆವು. ಹಿರಿಯ ಜೀವಕ್ಕೆ ಆಶ್ರಯವಿತ್ತು ಬೆಳೆಸುವ ಹಿರಿಯ ಗುಣವನ್ನು ಅವರಿಬ್ಬರೂ ಪಡೆದಿದ್ದಾರೆ. ಶ್ರೇಯಾಂಸನ ಮನೋಧರ್ಮವನ್ನು ಅರಿಯುವ ಇಂಗಿತಜ್ಞಾನ ಇವರಿಬ್ಬರಲ್ಲೂ ಇದೆ. ಶ್ರೇಯಾಂಸನ ಕಲ್ಯಾಣವನ್ನು ಸಾಧಿಸ

ಬೇಕೆಂದು ಇವರಿಬ್ಬರೂ ಅಹರ್ನಿಶಿ ತೊಳಲಾಡಿದರು. ಕಲಾವತಿ ಸತ್ಕುಲ ಸಂಪನ್ನೆ; ಲಲಿತೆ ವೇಶ್ಯೆಯ ಪುತ್ರಿ. ಕೆಸರಿನಲ್ಲಿ ಹುಟ್ಟಿ ವಿಕಸಿತವಾದ ಕಮಲ ದಂತೆ ಲಲಿತೆ. ನಾನಾ ಸಂದರ್ಭಗಳಲ್ಲಿ ಈಕೆಯೆಸಗಿದ ಉಪಕಾರ ಚಿರಸ್ಮರಣೀಯವಾದುದು. ಶ್ರೇಯಾಂಸನೊಡನೆ ದೈಹಿಕ ಸಂಬಂಧವನ್ನಿಟ್ಟುಕೊಳ್ಳುವ ಆಶೆ ಆಕೆಗೆ ಇದ್ದರೂ, ಅದನ್ನು ಹೇಗೋ ದಮನಮಾಡಿಕೊಂಡು, ನಿಷ್ಕಲಂಕ ಪ್ರೇಮವೊಂದನ್ನೇ ಇಟ್ಟುಕೊಂಡು ಬಾಳಿದ ಕನ್ಯಾರತ್ನ ಲಲಿತೆ! ನಾನಾ ವೇಳೆ ತನ್ನ ಬಾಳನ್ನು ಅಡ್ಡಮಾರ್ಗಕ್ಕೆಳೆಯುವ ಪರಿಸ್ಥಿತಿಯೊದಗಿ ಬಂದರೂ, ಅವುಗಳನ್ನೆಲ್ಲ ನಿಭಾಯಿಸಿಕೊಂಡು, ಬಾಳಿದ ಧೀರೆ ಈ ಲಲಿತೆ! ಈಕೆಯಲ್ಲೂ ಕಲಾವತಿಯಲ್ಲೂ ಕಾರ್ಯದಕ್ಷತೆಯ ಜೊತೆಗೆ ಕಾರ್ಯವಿಚಕ್ಷಣತೆಯೂ ಸೇರಿ, ಇವರ ಎಲ್ಲ ಶಕ್ತಿಗಳೂ ಶ್ರೇಯಾಂಸನ ಶ್ರೇಯಸ್ಸಿಗೆ ಮೀಸಲಾದುವು. ಆದರೂ ಇವರಿಬ್ಬರೂ ಲಕ್ಷ್ಮಿಯಂತೆ ವ್ಯಕ್ತಿತ್ವಹೀನರಲ್ಲ. ಇವರಿಬ್ಬರ ಪ್ರೇಮ ಶ್ರೇಯಾಂಸನನ್ನಾಕರ್ಷಿಸಿತು. ಇವರಿಬ್ಬರೂ ತಮ್ಮ ತಮ್ಮ ಪ್ರಭಾವದಿಂದ ಶ್ರೇಯಾಂಸನನ್ನು ಆಳಿದರು. ಶ್ರೇಯಾಂಸನನ್ನು ಆಳಿದರಾದರೂ ಎಂದೂ ಅಳಿಸದೆ ಬಾಳಿದ ಆತನನ್ನು ಭವ್ಯಾತ್ಮರು ಕಲಾವತಿ ಮತ್ತು ಲಲಿತೆಯರು!

ಇನ್ನು ಜಿನಗೌಡ ಮತ್ತು ನೇರಲಕಟ್ಟೆಯವರ ವಿಚಾರಕ್ಕೆ ಬರೋಣ. ಇವರಿಬ್ಬರೂ ಸ್ವಾರ್ಥಪರರು. ತಮ್ಮ ವಿಷಯಲಂಪಟತನಕ್ಕಾಗಿ, ತಮ್ಮ ದುರಾಶೆಗಾಗಿ ಯಾವ ಲೋಕಕ್ಕೆ ಬೇಕಾದರೂ ಹಿಂದು ಮುಂದು ನೋಡದೆ ಬೆಂಕಿ ಹಚ್ಚುವಂತಹ ದುರಾತ್ಮರಿವರು. ಇವರನ್ನು ವಿಶ್ವಾಸಘಾತಕರೆಂದರೂ ಸರಿ; ಎಂದೂ ಸರಿಪಡಿಸಲಾಗದಂತಹ ಕುಸಂಸ್ಕೃತರು; ಎಂದೂ ಪರಹಿತವನ್ನು ಯೋಚಿಸದ ಚಂಡಾಲರಿವರು ಶ್ರೇಯಾಂಸನಿಂದ ಆಗಬಹುದಾಗಿದ್ದ ಲೋಕ ಸೇವೆಗೆ ಅಡ್ಡಬಂದು ಅಡ್ಡಿಯೊಡ್ಡಿದರು. ಈ ಪ್ರತಿಶಕ್ತಿಗಳನ್ನು ಎದುರಿಸಿ ಬಾಳುವ ಸಾಮರ್ಥ್ಯವಾಗಲಿ, ಕೆಚ್ಚಾಗಲಿ ಶ್ರೇಯಾಂಸನಲ್ಲಿಲ್ಲದುದರಿಂದ, ಇವರು ಇಷ್ಟು ಬೆಳೆಯಲು ಅವಕಾಶ ದೊರೆಯಿತು. ಈ ಕುತಂತ್ರಿಗಳನ್ನು ಭೂಗತ ಮಾಡಲು ವಕ್ರಮಾರ್ಗವೊಂದೇ ಸರಿ. ಆದರೆ ಶ್ರೇಯಾಂಸನ ಬಾಳು ಹಾಗೂ ಮನೋಧರ್ಮ ಸಹಜವಾದುದು, ಸರಳವಾದುದು.

ಅಕ್ಕಾನಾನಿ ನಿಜವಾದ ವೇಶ್ಯೆ. ವೇಶ್ಯೆಗಿರಬಹುದಾದ ಹಾಗು ಇರಬೇಕಾದ ತಾಟಗಿತ್ತಿತನವೆಲ್ಲ ಈಕೆಗಿದೆ. ಧನ ಸಂಗ್ರಹಕ್ಕಾಗಿ ಏನು ಮಾಡಲೂ ಈಕೆ ಸಿದ್ಧ. ಮಗಳನ್ನೂ ತನ್ನ ಮಾರ್ಗದತ್ತ ಸೆಳೆದು ಭಾಗ್ಯವನ್ನು ದೋಚುವ

ಹವಣಿಕೆ ಈಕೆಯದು. ಜಿನಗೌಡರೆಸಗಿದ ನೀಚಕಾರ್ಯಕ್ಕೆ ಈ ಸಾನಿ ಹಣದಾಶೆಯಿಂದ ಬೆಂಬಲಿಗಳಾಗುತ್ತಿದ್ದಳು. ಮಗಳನ್ನು ತನ್ನ ಮಾರ್ಗಕ್ಕೆ ಸೆಳೆಯಲು ಯತ್ನಿಸಿ ವಿಫಲಳಾದಳು, ಈ ಸಾನಿ.

ಸುಂದರವ್ವನ ಪಾತ್ರವೂ ಸುಂದರವಾಗಿಯೆ ಚಿತ್ರಿತವಾಗಿದೆ. ಆಕೆಗೆ ದೇವರೂ ಬೇಕು; ಅದಕ್ಕಿಂತ ಹೆಚ್ಚಾಗಿ ಮಾನವರೂ ಬೇಕು. ಭಕ್ತಿಗಿಂತ ಹೆಚ್ಚಾಗಿ ಈಕೆಯಲ್ಲಿ ಮೋಹವೂ ಇದೆ. ಮೋಹ ಅಂತೆ ಮರುಕ ಈಕೆಯಲ್ಲಿ ನೆಲೆ. ಶ್ರೀಯಾಂಸನ ಹಿತಕ್ಕಾಗಿ ಲಕ್ಷ್ಮಿಗೆ ದ್ರೋಹವೆಸಗುವ ಪ್ರೇರಣೆಯನ್ನು ಪುಟಗೊಳಿಸಿತು. ಸಲ್ಲೇಖನದಲ್ಲೂ ಈಕೆಯ ಗಮನ ಶ್ರೀಯಾಂಸನತ್ತ. ಶ್ರೀಯಾಂಸನಿಗೆ ಒಳ್ಳೆಯದಾಗದಿದ್ದರೆ ಈಕೆಗೆ ಮುಕ್ತಿಬೇಕಿಲ್ಲ. ಅಂತ್ಯದಲ್ಲಿ ಶ್ರೀಯಾಂಸನನ್ನೂ ಕಲಾವತಿಯನ್ನೂ ಒಂದುಗೂಡಿಸಿ, ಸಮಾಧಾನಚಿತ್ತಳಾಗಿ, ಸುಂದರವ್ವ ಪರಂಧಾಮವನ್ನೈದಿದಳು.

ಪದ್ಮಪ್ಪ ನಿರ್ಲಿಪ್ತ; ನಿರ್ವಿಕಾರಿ; ನಿಜವಾದ ಯತೀಶ್ವರ. ಸಂಸಾರಕ್ಕೆ ಅಂಟಿಯೂ ಅಂಟದಂತೆ ಕೆಲದಿನ ಬಾಳಿ, ಅಂತ್ಯದಲ್ಲಿ ಬಾಹ್ಯಾಂಭ್ಯಂತರದ ಬಂಧನಗಳನ್ನೆಲ್ಲ ಮನಃಪೂರ್ವಕ ಕಿತ್ತೊಗೆದು, ಜಿನಮುನಿಗಳಿಗೆ ಮಾದರಿ ಯಾಗಿದ್ದಾನೆ ಪದ್ಮಪ್ಪ.

ಮುನಿಗಳಿಗೆ ಆಹಾರ ನೀಡುವಾಗಿನ ಸಂದರ್ಭ ಜೈನೇತರರಿಗೆ ಹಿಡಿಸು ವಂತೆ, ಶ್ರೀ ಮಿರ್ಜಿ ಅಣ್ಣಾರಾಯರು ಚಿತ್ರಿಸಿದ್ದಾರೆ. ಅಲ್ಲಿಯ ಶ್ರಾವಕರ ಮನೋಧರ್ಮ ಹಾಗು ಮುನಿಧರ್ಮಗಳೆರಡೂ ವಿವರವಾಗಿ ಮೂಡಿಬಂದಿವೆ.

ಶ್ರವಣಬೆಳಗುಳದ ಯಾತ್ರಾಸಂದರ್ಭ ಕಲಾಯುಕ್ತವಾಗಿದೆ. ಭಕ್ತಿಯ ಜೊತೆಯಾಗಿ, ಕಲೆಯು ಮೆರಗೂ ಬೆರೆತು ಅಪೂರ್ವ ಕಳೆಯಿಂದ ಕೃತಿಯು ಈ ಭಾಗ ರಾರಾಜಿಸಿದೆ.

ಶ್ರೀಯಾಂಸ ಪೋಲೀಸರ ವಶನಾಗಿದ್ದು ಪಾರಾದ ಸಂದರ್ಭವನ್ನು ಚಿತ್ರಿಸುತ್ತ, ಆ ಸಂದರ್ಭದಲ್ಲಿ ಲಲಿತೆ ಹೇಗೆ ಶ್ರೀಯಾಂಸನ ಬಿಡುಗಡೆಗೆ ಕಾರಣಳಾದಳೆಂಬುದನ್ನು ಅಸ್ಪಷ್ಟವಾಗಿಸಿದ್ದಾರೆ ಮಿರ್ಜಿ ಅಣ್ಣಾರಾಯರು. ಮೊದಲೇ ಸೂಳೆಯ ಮಗಳಾದ ಲಲಿತೆ ಆಗ ಏನಾದರೂ ತನ್ನ ಮೈಯಿತ್ತು, ಶ್ರೀಯಾಂಸನ ಬಿಡುಗಡೆಗೆ ಕಾರಣಳಾದಳೋ ಏನೋ ಎಂಬ ಸಂದೇಹ ವಾಚಕರಲ್ಲಿ ಮೂಡದಿರದು. ಇಲ್ಲಿಯ ನಿಜಾಂಶವನ್ನು ಸ್ಪಷ್ಟಪಡಿಸಿದ್ದರೆ ಮೇಲಾಗಿತ್ತು.

ಒಟ್ಟಿನಲ್ಲಿ ಶ್ರೇಯಾಂಸನ ಕಲಾಮಯವಾದ ಬಾಳು ಸಹಜ ಸುಂದರವಾಗಿ ಸ್ಫುಟಗೊಂಡಿದೆ. ಶ್ರೇಯಾಂಸನ ಬಾಳು ಸೌರವ್ಯೂಹದತಿಂದೆ ನಾನಾ ಉಪಗ್ರಹಗಳು ಸೂರ್ಯನ ಸುತ್ತ ಸುತ್ತುವಂತೆ ಲಲಿತೆ, ಕಲಾವತಿ, ಬಾಳವ್ವ, ಸರಸವ್ವ, ಸುಂದರವ್ವ, ಲಕ್ಷ್ಮಿಯರು ಶ್ರೇಯಾಂಸನನ್ನು ಸುತ್ತುಗಟ್ಟಿದ್ದಾರೆ. ನೀರಲಕಟ್ಟಿ ಹಾಗೂ ಜಿನಗೌಡ ರಾಹು ಕೇತುಗಳಾಗಿ ಅವನ ಶ್ರೇಯಸ್ಸನ್ನು ಹಾಗೂ ಯಶಸ್ಸನ್ನು ಕಬಳಿಸಿದ್ದಾರೆ. ಅನುಕೂಲ ಶಕ್ತಿಗಳ ಹಾಗು ಪ್ರತಿಕೂಲ ಶಕ್ತಿಗಳ ತಿಕ್ಕಾಟ ಮತ್ತು ಪರಿಣಾಮ ಸರ್ವಾಂಗಸುಂದರವಾಗಿ ಒಡಮೂಡಿದೆ.

ದತ್ತಮೂರ್ತಿ ಲೋಕಾನುಭವವುಳ್ಳಾತ. ತನಗೆ ಸರಿಕಂಡದ್ದನ್ನು ಸರಿಯೆನ್ನುವಾತ. ಈತನ ಗುರಿಯೂ ಶ್ರೇಯಾಂಸನಂತೆ ಲೋಕಕಲ್ಯಾಣಕಾರಿಯಾದುದೇ; ಆದರೆ ಇವರಿಬ್ಬರ ಮಾರ್ಗ ಬೇರೆ ಬೇರೆ. ಈತನಲ್ಲಿ ಸಂಘಟನಾ ಶಕ್ತಿಯಿದೆ; ಹಿಡಿದುದನ್ನು ಸಾಧಿಸುವ, ಮನೋದಾರ್ಢ್ಯವಿದೆ; ತನ್ನತ್ತ ಜನತೆಯನ್ನು ಸೆಳೆಯುವ ಸಾಮರ್ಥ್ಯವಿದೆ. ಶ್ರೇಯಾಂಸನಿಗೂ ತನಗೂ ಅಭಿಪ್ರಾಯಭೇದ ಬಂದರೂ, ಮರೆಯಾಗಿ ನಿಂತು ಶ್ರೇಯಾಂಸನ ಹಿತವನ್ನು ಬಯಸಿದವ ದತ್ತಮೂರ್ತಿ. ಪ್ರತ್ಯಕ್ಷವಾಗಿ ದತ್ತಮೂರ್ತಿ ಶ್ರೇಯಾಂಸನಿಗೆಸಗಿದ ಉಪಕಾರ ಕಾದಂಬರಿಯಲ್ಲಿ ತುಂಬಿದೆ; ತನ್ನನ್ನೂ ತೊರೆದು ಶ್ರೇಯಾಂಸ ಹೊರಟುಹೋದ ಮೇಲೂ ಈತನಲ್ಲಿ ದ್ವೇಷ ಮೂಡಲಿಲ್ಲ; ಶ್ರೇಯಾಂಸನ ಮೇಲಿದ್ದ ಪ್ರೇಮ ನೂರ್ಮಡಿಯಾಯಿತೇ ವಿನಾ ನುಚ್ಚಾಗಲಿಲ್ಲ. ದತ್ತಮೂರ್ತಿಯ ಪಾತ್ರವೂ ಸಹ ಶ್ರೇಯಾಂಸನಷ್ಟೇ ಹಿರಿದಾದುದು.

ಆತ್ಮಾರಾಮ ಮಾಸ್ತರರ ಬಾಳು ಭವ್ಯವಾದ ಬಾಳು. ಶ್ರೇಯಾಂಸನ ಭವಿಷ್ಯಕ್ಕಾಗಿ ತೊಳಲಾಡಿದವರು; ಶ್ರೇಯಾಂಸನ ಅಭಿರುಚಿಯನ್ನು ತಿಳಿದವರು; ಅಂತ್ಯದಲ್ಲಿ ಅವನ ಶ್ರೇಯಸ್ಸಿಗಾಗಿ ಅವರು ತಮ್ಮ ಪವಿತ್ರ ಜೀವನವನ್ನೇ ಧಾರೆಯೆರೆದ ಆದರ್ಶಗುರು ಕೀರ್ತಿಕಾಮಿನಿಯನ್ನು ಎಂದೂ ಬಯಸಿದವರಲ್ಲ ಅವರು. ಆತ್ಮಾರಾಮ ಮಾಸ್ತರ ಬಾಳು, ತ್ಯಾಗಮಯ ಜೀವನ, ಶ್ರೇಷ್ಠವಾದುದು; ಅನುಕರಣೀಯವಾದುದು.

ಮಿರ್ಜಿ ಅಣ್ಣಾರಾಯರ ಈ "ಶ್ರೇಯಾಂಸ" ಕಾದಂಬರಿ ಉತ್ತಮವಾಗಿ ಮೂಡಿಬಂದಿದೆ. "ನಿಸರ್ಗ" ಕಾದಂಬರಿಯನ್ನು ಬರೆದು ಕನ್ನಡನಾಡಿನಾದ್ಯಂತ ಪ್ರಖ್ಯಾತರಾಗಿರುವ ಇವರು, ಇನ್ನೂ ಅನೇಕ "ಕೃತಿರತ್ನ"ಗಳನ್ನು ಕನ್ನಡ ನುಡಿಯಲ್ಲಿ ನೀಡುವರೆಂದು ನಿರೀಕ್ಷಿಸೋಣ.

['ಜಯಂತಿ'ಯ ಕೃಪೆಯಿಂದ.]

# ಅಣ್ಣಾರಾಯರ ಸಣ್ಣಕಥೆಗಳು

ಶ್ರೀ. ಜಾಧವ ರಾಮರಾಯರು, ಬಿ. ಎ (ಆನರ್ಸ), ಅಂಕಲಗಿ.

ಕನ್ನಡ ಸಾಹಿತ್ಯದಲ್ಲಿ ಹಳ್ಳಿಯ ಜೀವನವನ್ನು ಚಿತ್ರಿಸಿದವರಲ್ಲಿ ಶ್ರೀಮಾನ್ ಅಣ್ಣಾರಾಯ ಮಿರ್ಜಿಯವರು ಮೊದಲಿಗರಾಗಿದ್ದಾರೆ. ಇಲ್ಲಿ ನಾವು, ಇವರಿಗಿಂತ ಮೊದಲು ಹಳ್ಳಿಯ ಜೀವನವು ಕನ್ನಡದಲ್ಲಿ ಮೂಡಿಲ್ಲವೊ? ಹೇಗೆ? ಈ ವಾದಕ್ಕೆ ಹೊರಟಿಲ್ಲ ಆದರೆ ಕವಿಭೂಷಣ ಶ್ರೀ ಕೃಷ್ಣಶರ್ಮ ಬೆಟಗೇರಿಯವರು ಒಂದೆಡೆಗೆ ಹೇಳಿದಂತೆ* "ಹಳ್ಳಿಯ ಜೀವನವನ್ನೇ ಹೆಚ್ಚಾಗಿ ರೂಪಿಸದಿದ್ದ ಕನ್ನಡ ಲಲಿತ ಸಾಹಿತ್ಯದಲ್ಲಿ, ಹದಿನಾರಾಣೆ ಹಳ್ಳಿಯ ಕತೆಯಾಗಿರುವ 'ನಿಸಗ'ವನ್ನು ಒಡಮೂಡಿಸಿದವರು" ಅಣ್ಣಾರಾಯರಾಗಿದ್ದಾರೆ. ಈ ಹಳ್ಳಿಗರ ಜೀವನವನ್ನು ಚಿತ್ರಿಸುವ ಭಾಗ್ಯವನ್ನು ಮಿರ್ಜಿಯವರು ಪಡೆದು ಬಂದಿದ್ದಾರೆಂದೇ ನಾವು ಹೇಳಬೇಕು. ಯಾಕೆಂದರೆ ಆ "ಜನತೆಯ ನಟ್ಟನಡುವೆ ಯಾವಾಗಲೂ ಇದ್ದುಕೊಂಡು ಹಳ್ಳಿಯ ಆಗುಹೋಗುಗಳಲ್ಲಿ ಒಂದಾಗಿ ಹೊಸ ಬಗೆಯ ಜನತೆಯ ಸಾಹಿತ್ಯವನ್ನು ನಿರ್ಮಿಸುವ ಲೇಖಕರು ಕನ್ನಡಕ್ಕೆ ತಂಡತಂಡವಾಗಿ ಬೇಕಾಗಿದ್ದಾರೆ. ಅಂಥವರಲ್ಲಿ ಸ್ವಾನುಭವ ಮತ್ತು ಜನತಾ ದೃಷ್ಟಿಗಳ ಸಂಯೋಗ ದೊರೆಯುತ್ತದೆ. ಅವರ ಬರೆಹಕ್ಕೆ ತಪ್ಪದ ಅರಿವು, ನೈಜವಾದ ಮಮತೆ ಇವುಗಳ ಕಾಂತಿಯಿರುತ್ತದೆ. ಇಂಥ ಲೇಖಕರಲ್ಲಿ ಒಬ್ಬರಾಗಿ ಅಣ್ಣಾರಾಯರು 'ನಿಸರ್ಗ'ವನ್ನು ರಚಿಸಿದ್ದರಲ್ಲಿ ಅವರ ವೈಶಿಷ್ಟ್ಯವಿದೆಯೆಂದು ನಾನು ತಿಳಿಯುತ್ತೇನೆ"†—ಎಂದು ಡಾ. ರಂ. ಶ್ರೀ. ಮುಗಳಿಯವರು ನುಡಿದಿದ್ದಾರೆ. ಅದರಿಂದ ಅಣ್ಣಾರಾಯರ ಸಣ್ಣಕಥೆಗಳ ಜೀವ-ಜೀವಾಳವಾದರೂ ಹಳ್ಳಿಯ ಜೀವನ ಚಿತ್ರಣದ ಕುಶಲತೆ ಹಾಗೂ ಸೂಕ್ಷ್ಮತೆಗಳಲ್ಲಿಯೇ ಇದೆಯೆಂದು ಹೇಳಬಹುದು.

ಮಿರ್ಜಿಯವರು ಇಲ್ಲಿಯ ವರೆಗೆ ಹದಿನೆಂಟು ಕಥೆಗಳನ್ನು ಬರೆದು ಪ್ರಕಟಿಸಿದ್ದಾರೆ. ಅವುಗಳಲ್ಲಿ ಕಥಾವಸ್ತುವಿನ ಆಯ್ಕೆಯ ದೃಷ್ಟಿಯಿಂದ ಮೂರು ವಿಭಾಗಗಳನ್ನು ಮಾಡಬಹುದಾಗಿದೆ. ಮೊದಲನೆಯ ಗುಂಪಿನಲ್ಲಿ ಶುದ್ಧ ಹಳ್ಳಿಗರ ಜೀವನವನ್ನೇ ಚಿತ್ರಿಸಿರುವ ಕಥೆಗಳನ್ನು ಸೇರಿಸಬಹುದು.

* 'ಜಯಂತಿ' ಸಪ್ಟಂಬರ ೧೯೪೬.

† 'ನಿಸರ್ಗ'ದ ಮುನ್ನುಡಿಯಿಂದ.

ಇನ್ನೊಂದು ಗುಂಪಿನಲ್ಲಿ, ಇತ್ತೀಚಿನ ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಹಿನ್ನಲೆಯಲ್ಲಿ ರೂಪುಗೊಂಡ ಸಣ್ಣಕಥೆಗಳನ್ನು ವಿಭಾಗಿಸಬಹುದಾಗಿದೆ. ಇನ್ನು ಮೂರನೆಯ ವಿಭಾಗದಲ್ಲಿ ಇವರ ಐತಿಹಾಸಿಕ ಕಥೆಗಳು ಸಮಾವೇಶ ಗೊಳ್ಳುತ್ತವೆ. ಈ ಪ್ರಕಾರ ವಿಭಜಿಸಿದಾಗ ಅಣ್ಣಾರಾಯರ ಸಣ್ಣಕಥೆಗಳಲ್ಲಿ ಮುಂದೆ ಕಾಣಿಸಿದ ಮೂರು ಗುಂಪುಗಳಾಗುತ್ತವೆ.

(೧) ಪ್ರಣಯ ಸಮಾಧಿ, ಎಂತಹ ಕಂಟ್ರೋಲು?, ಪಾಲುಗಾರಿಕೆ, ನಮ್ಮೂರ ನಾಯಕರು, ಈರ ಯಾಕೆ ಹೋದ?, ಕಲಿತ ಕಳ್ಳ, ಮಾತುಕತೆ, ಬೀರನ ಬಾವಿ, ಆ ಕಣ್ಣೀರು, ಒಗಟು, ಕರುಳು, ಕುಸುರೆಳ್ಳು.

(೨) ದ್ರೋಹ, ಸೂರಸಿಂಹ, ವಿಜಯಶ್ರೀ.

(೩) ಗೆಲುವು, ಪರಿವರ್ತನ, ತವನಿಧಿ.

ಈ ಕಥೆಗಳಲ್ಲಿ ಹಲವು 'ಪ್ರಣಯ ಸಮಾಧಿ' ಮತ್ತು 'ವಿಜಯಶ್ರೀ' ಎಂಬ ಎರಡು ಕಥಾಸಂಗ್ರಹಗಳಲ್ಲಿ ಪ್ರಕಟವಾಗಿವೆ. ಉಳಿದ ಕಥೆಗಳು 'ಜಯಂತಿ' ಹಾಗೂ 'ಸನ್ಮತಿ' ಮಾಸಿಕಗಳಲ್ಲಿ ಬೆಳಕುಕಂಡಿವೆ: ಇವುಗಳಲ್ಲಿ 'ಒಗಟು' ಎಂಬ ಕಥೆಯು 'ಜಯಂತಿ'ಯ ಸಣ್ಣಕಥೆಗಳ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನವನ್ನೂ ಪಡೆದಿದೆ.

ಅಣ್ಣಾರಾಯರು ಬರೆದಿರುವ ಕಥೆಗಳಲ್ಲಿ ಬಹು ಭಾಗದವು ನಮ್ಮ ಹಳ್ಳಿಗರ ಸಂಸಾರಗಳಿಗೆ ಸಂಬಂಧಪಟ್ಟವು; ಅದೂ ಬಡತನದ ಸಂಸಾರ ಚಿತ್ರಗಳನ್ನು ಕೊಡುವಂಥವು. ಇವೆಲ್ಲ ಸಂಸಾರಗಳು—ಕುಟುಂಬಗಳು—ಸಮಾಜದ ಮುಳ್ಳುಕಂಟಿಯಲ್ಲಿ ಅರಳಿದ ಕುಸುಮಗಳು. ನಮ್ಮ ಸಮಾಜದ ನೈತಿಕ ನೆಲೆ ಎಷ್ಟು ಕೆಳತರಗತಿಗೆ ಹೋಗಿದೆ? ಮಾನವತೆಯನ್ನೂ ಉಳಿದು ಜನ ಹಣದ ಬೆನ್ನು ಹೇಗೆ ಹತ್ತಿದೆ? ಅದರಿಂದ ಅನೇಕ ಸಂಸಾರಗಳು ಹೇಗೆ ಬಡತನಕ್ಕೆ ತುತ್ತಾಗುತ್ತಿವೆ? ವ್ಯವಹಾರ, ಭೂಮಿಯ ಸಮಸ್ಯೆಗಳಲ್ಲಿ ಎಂಥ ಅಪ್ರಾಮಾಣಿಕತೆಯು ಜನತೆಯಲ್ಲಿ ಸಮಾವೇಶವಾಗುತ್ತಿದೆ? ಇವೇ ಮೊದಲಾದ ಸಾಮಾಜಿಕ ಸಮಸ್ಯೆಗಳ ಮಧ್ಯದಲ್ಲಿ ಬಾಳನ್ನು ನೂಕುತ್ತಿರುವ ಸಂಸಾರ ಚಿತ್ರಗಳೇ ಇಲ್ಲಿ ಹೆಚ್ಚಾಗಿ ಮೂಡಿವೆ. ಅವುಗಳಲ್ಲೆಲ್ಲ ಪ್ರಣಯ, ಪ್ರೇಮ, ದಯೆ, ಮಾನವತೆ, ದೇಶಭಕ್ತಿ, ವಾತ್ಸಲ್ಯ, ವಿಶ್ವದ ನಿಗೂಢ ಸತ್ಯ, ಕರುಣೆ, ಕ್ರೂರತೆ, ಪಾವಿತ್ರ್ಯ, ಸಂಶಯಭಾವ— ಇವೆಲ್ಲ ಹದವರಿತು, ಕಲೆಯ ವಿಲಾಸದಲ್ಲಿ ಮೈಗೂಡಿ ಬಂದಿವೆ. ಹಲವು ಕಡೆಗಳಲ್ಲಿ ಓದುಗರ ಮೈಯನ್ನು

ಜುಮ್ಮೆನ್ನಿಸಿ, ಅವರ ಮನದ ಕರುಣೆ ಒಸರುವಂತೆ ಮಾಡಿ, ಮರುಕ್ಷಣದಲ್ಲಿ ಆ ವಿಶಾಲವಾದ ಸಾಮಾಜಿಕ ಸಮಸ್ಯೆಗಳ ಬಗ್ಗೆ ವಿಚಾರ ಮಾಡಲಿಕ್ಕೆ ಈ ಕಥೆಗಳು ಹಚ್ಚುತ್ತವೆ. ಅದರಿಂದ ಅಲೌಕಿಕವಾದ ಆನಂದವನ್ನು ಪಡೆಯ ಬೇಕೆನ್ನುವವರಿಗೆ ಅಣ್ಣಾರಾಯರ ಕಥೆಗಳಲ್ಲಿ ಏನೂ ಸಿಗಲಾರದು. ಆದರೆ ಅಲೌಕಿಕ ಸತ್ಯದ—ಎಂದೂ ಒಡೆಯುದ ಒಗಟಿನಂತಿರುವ ವಿಶ್ವಸಮಸ್ಯೆಯ ಅರಿವು ಮಾತ್ರ ಆಗದೆ ಇರುವದಿಲ್ಲ. ಇವು ಅಣ್ಣಾರಾಯರ ಸಣ್ಣಕಥೆಗಳ ವೈಶಿಷ್ಟ್ಯಗಳು.

ಪ್ರಣಯ ಸಮಾಧಿ, ಮಾತುಕತೆ, ಕುಸುರೆಳ್ಳು ಈ ಮೂರು ಕಥೆಗಳು, ಮಾನವ ಜೀವನದಲ್ಲಿ ಅತ್ಯಂತ ಪ್ರಾಮುಖ್ಯತೆಯನ್ನು ಪಡೆದ ಗಂಡು-ಹೆಣ್ಣಿನ ಪ್ರಣಯ-ಪ್ರೇಮಗಳಿಗೆ ಸಂಬಂಧಿಸಿದ ಸಮಸ್ಯೆಯನ್ನು ಚಿತ್ರಿಸುತ್ತವೆ. 'ಪ್ರಣಯ ಸಮಾಧಿ'ಯಲ್ಲಿ ಬಲಿತ ಹೆಣ್ಣು ಸರಿವರೆಯುದ ಗಂಡನನ್ನು ಹೊಂದದೆ ಎಳೆವರೆಯುದ ಹುಡುಗನ ಕೂಡ ಪ್ರಣಯದಾಟವನ್ನು ಆಡಲೆಳಸಿದ ಸನ್ನಿವೇಶ ಇದೆ. ಆ ಸಂದರ್ಭವನ್ನು ಚಿತ್ರಿಸಿದ ರೀತಿಯು ಬಹು ಮನೋಹರವಾಗಿದೆ. ಪವಿತ್ರ-ಅಪವಿತ್ರ ಭಾವಗಳನ್ನು ಮೂಡಿಸುವ ಕುಶಲ ಕಲೆಯು ಇಲ್ಲಿ ವ್ಯಕ್ತವಾಗಿದೆ.

"ಹಚ್ಚನೆಯ ಹುಲ್ಲಿನಿಂದ ಮುಚ್ಚಿದ ಮಡಿಯಲ್ಲಿ ನನ್ನನ್ನು ಕರೆದೊಯ್ದಳು. ಅಲ್ಲಿ ಕುಳ್ಳಿರಿಸಲು ಪ್ರಯತ್ನಿಸಿದಳು; ಕಡೆಗೆ ಕುಳ್ಳಿರಿಸಿ ಪವಡಿಸಿದಳೂ ಕೂಡ. ತನ್ನ ರೇಶಿಮೆಯ ಸೆರಗಿನ ತುದಿಯಿಂದ ನನ್ನ ಮುಖವನ್ನು ಮುಚ್ಚಿದಳು. ನಾನು ಅವಳನ್ನೇ ನೋಡುತ್ತ ಇದೀಗ ಬಾಯಿ ಬರುತ್ತಿರುವ ಬಾಲಕನಂತೆ:—

'ಅಕ್ಕಾ ಹೀಗೇಕೆ?' ಎಂದು ಕೇಳಿದೆ!

'ನಾನು ಹೀಗೇಕೆ ಮಾಡುತ್ತಿದ್ದೇನೆ ಹೇಳು ನೋಡೋಣ?' ಧ್ವನಿಯಲ್ಲಿ ನಡುಕ, ಅದಕ್ಕಿಂತ ಅಧಿಕವಾಗಿ ಮರುಕ ತುಂಬಿತ್ತು.

'ನನಗೆ ಗೊತ್ತಿಲ್ಲ!'

'ಅದೇಕೆ ಗೊತ್ತಿಲ್ಲ?' ಎಂದು ನನ್ನ ಕಣ್ಣುಗಳನ್ನು ಮುಚ್ಚಿದಳು.

'ಗೊತ್ತಿಲ್ಲ, ಆದುದರಿಂದಲೇ ಗೊತ್ತಿಲ್ಲ . . . . .'

'. . . . . . . . . . . . . .'

'ನಿನ್ನ ಮೃದುವಾದ ಮೈಯ ಸೋಂಕಿನಿಂದ ತಾಯಿಯ ತೊಡೆಯಲ್ಲಿ

ಪವಡಿಸಿ ಪಾಲುಣ್ಣುವ ಪಸುಳೆಯಂತಾಗಿದೆ ನನಗೆ! ಆದರೆ ನಿನ್ನ ಕಣ್ಣುಗಳಲ್ಲಿ ಕಾರ್ಗತ್ತಲೆಯ ಗೂಢರಹಸ್ಯವು ಹರಿದಾಡುತ್ತಿರುವದಲ್ಲ!'

ನನ್ನ ಮಾತು ಮುಗಿಯುವುದರಲ್ಲಿಯೇ ಅವಳು ಸ್ವಲ್ಪ ದೂರಕ್ಕೆ ಸರಿದಿದ್ದಳು. ದೃಷ್ಟಿಯಲ್ಲಿ ಚಾಂಚಲ್ಯ ಬೆರೆತಿತ್ತು. ಕಣ್ಣಕುಣಿಕೆಗಳಲ್ಲಿ ನೀರೂರಿತ್ತು. ಆಗ ಏರುತ್ತಿದ್ದ ಚಂದ್ರನ ಕಿರಣವೊಂದು ಗಿಡದೆಲೆಗಳ ಸಂದಿಯೊಳಗಿಂದ ಹಾಯ್ದು ಅವಳ ಮುಖದ ಮೇಲೆ ಬಿತ್ತು. ಅದು ಅಲ್ಲಿ—ತಾವರೆಯ ಲಾವಣ್ಯವನ್ನು ತಳೆದ ಅವಳ ಮುಖದಲ್ಲಿ—ಕ್ಷಮಾಯಾಚನೆಯ ಕಿರಣರೂಪದಿಂದ ಪ್ರತಿಫಲಿಸಿದಂತೆ ತೋರಿತು."

ಇಲ್ಲಿ ಮಲಿನಮನೋವೃತ್ತಿ, ಒಂದು ಕ್ಷಣದಲ್ಲಿ ನಾರಿಯನ್ನು ಪ್ರಕೃತಿ ಗುಣಕ್ಕೆ ವಶಪಡಿಸಿ, ಅಧಃಪತನಕ್ಕೆ ಎಳೆದರೂ ಮರುಕ್ಷಣದಲ್ಲಿ ಅದು ಹೇಗೆ ಎಚ್ಚರಗೊಂಡು ಸಂಯಮದ ಸಂಸ್ಕೃತಿಯ ಕಡೆಗೆ ತಿರುಗಿದೆಯೆಂಬುದನ್ನು ಬಹು ಸೂಕ್ಷ್ಮವಾಗಿ ಲೇಖಕರು ಹಿಡಿಸಿ ತೋರಿಸಿದ್ದಾರೆ. ಇದೊಂದು ಪರಿಯ ಪ್ರೇಮವಾದರೆ 'ಕುಸುರೆಳ್ಳು' ನಿಮಿತ್ತವಾಗಿ ಗಂಡಹೆಂಡಿರಲ್ಲಿ ಉಂಟಾದ ಸಂಶಯಪಿಶಾಚಿಯು ಎಂಥ ಸರಸಸಂಸಾರವನ್ನೂ ವಿರಸಗೊಳಿಸು ತ್ತಿದೆಯೆಂದು ಚಿತ್ರಿಸುವ ಪ್ರೇಮದ ಬಗೆಯು ಇನ್ನೊಂದಾಗಿದೆ. ಈ ಕಥೆಯ ಪ್ರಾರಂಭ, ಬೆಳವಣಿಗೆ ಹಾಗೂ ಮುಕ್ತಾಯಗಳು ಕಲಾತ್ಮಕವಾಗಿಯೂ ಸ್ವಾರಸ್ಯಪೂರ್ಣವಾಗಿಯೂ ಇವೆ. ಗಂಡನಲ್ಲಿಯ ಸಂಶಯಪಿಶಾಚಿಯು ದೂರ ಹೋಗುವಂತೆ ನಿವಾರಣೋಪಾಯವನ್ನು ಲೇಖಕರು ಬಹು ಜಾಗ ರೂಕತೆಯಿಂದ, ಅಷ್ಟೇ ಆಕಸ್ಮಿಕವಾಗಿ ವ್ಯಕ್ತಪಡಿಸಿ, ಓದುಗರನ್ನು ಬೆರಗು ಗೊಳಿಸುತ್ತಾರೆ. ಇನ್ನು 'ಮಾತುಕತೆ'ಯಲ್ಲಿ ಪತಿತ ದಾಂಪತ್ಯದ ಸುಂದರ ಚಿತ್ರವಿದೆ. ಈ ಕಥೆಯ ತಂತ್ರವು ಕನ್ನಡ ಕಥಾಸಾಹಿತ್ಯಕ್ಕೇನೇ ಹೊಸ ದಾಗಿದೆ. ಗ್ರಾಮ ಸಂರಕ್ಷಕ ದಳದವರು ರಾತ್ರಿಯಲ್ಲಿ ಊರಲ್ಲಿ ಸುತ್ತುವಾಗ ಕೇಳಿದ ಮಾತುಗಳನ್ನೇ ಇಲ್ಲಿ ಪವಣಿಸುತ್ತ ಹೋಗಿದೆ. ಅವುಗಳ ಮುಖಾಂತರ ಒಂದು ಸಂಸಾರದ ಪತನಚಿತ್ರವನ್ನು ಅಣ್ಣಾರಾಯರು ಕೊಟ್ಟಿದ್ದಾರೆ. "ನೋಡು! ನಾಲ್ಕೂ ಮಕ್ಕಳನ್ನು ಸಂಬಾಳಿಸಿಕೊಂಡು, ನಾಲ್ಕು ದಿನ ಮರ್ಯಾದಿಯಿಂದ ಸಂಸಾರ ಮಾಡಿ ಹೋಗೋದಕ್ಕೂ ಬಹಳ ಬುದ್ಧಿವಂತಿಕಿ ಬೇಕಾಗ್ತದ. ಮನೆಗೆ ಹಿರಿಯಳಾದ ನೀನೂ ದಿನಾ ಬೆಳಗಾದರೆ ಜಗಳಾಡತ ಕೂತರ, ನಾ ಯಾವ ಗಿಡಕ್ಕ ಜೋತಾಡಲಿ?" ಎಂದು ಮನೆ

ಯೊಂದರ ಮುದುಕನು ಏಕಾಂತದಲ್ಲಿ ತನ್ನ ಮುದುಕಿಗೆ ಹೇಳುವ ಮಾತಿನ ಉಲ್ಲೇಖದಿಂದ ಆರಂಭವಾಗುತ್ತದೆ. ಆ ಕಥೆಯು ಆ ಮುದುಕ ಹೊಸದಾಗಿ ಹುಟ್ಟಿದ ಮೊಮ್ಮಗನನ್ನು ನೋಡಿ, ಮುಂದಿಗೆ ತಾನು ಮುಖ ತೋರಿಸಲಿಕ್ಕೆ ಆಗದೆ, ತೋಟದೊಳಗಿನ ಗಿಡಕ್ಕೆ ಉರುಲು ಹಾಕಿಕೊಳ್ಳುವ ಸಂಗತಿಯನ್ನು ಹೇಳುವ ಮಾತಿನಿಂದ ಮುಗಿಯುತ್ತಿದೆ. ಇಲ್ಲಿ ಮುನ್ನೆರಳಿನಂತೆ ಬಂದ ಧ್ವನಿರಮ್ಯತೆಯು ಉಚ್ಚ ಕಲಾವಂತಿಕೆಯ ಲಕ್ಷಣವಾಗಿದೆ.

ಇನ್ನು ಎಂತಹ ಕಂಟ್ರೋಲು? ನಮ್ಮೂರ ನಾಯಕರು, ಈರ ಯಾಕೆ ಹೋದ? ಕಲಿತ ಕಳ್ಳ, ಆ ಕಣ್ಣೀರು—ಈ ಕಥೆಗಳು ಬಡತನವನ್ನು ನವಿರು ನವಿರಾಗಿ ಚಿತ್ರಿಸುವ ಕಥೆಗಳಾಗಿವೆ. "ಹೊಟ್ಟೆಗೆ ಹಿಟ್ಟು ಸಿಕ್ಕದ ಇಂಥಾ ದಿನಗಳಲ್ಲಿ ವರ್ಷಕ್ಕೊಂದು ಬಾಣಂತನವು ಬೇರೆ! ದೇವರಿಗೆ ಕಣ್ಣು ಇಲ್ಲವೆ? ನಮ್ಮಂಥವರಿಗೇ ಏಕೆ ಕೊಡುತ್ತಿರುವನೋ ಮಕ್ಕಳನ್ನು!" ಎಂದು ಕಳವಳ ದಿಂದ ನುಡಿಯುವ ಹೆಂಡತಿಗೆ ಹೊರಗೆ ಹೊರಟ ಗಂಡನು, ಕೊರಳ ಹತ್ತಿರ ಹರಿದ ಕೋಟನ್ನು ಮುಚ್ಚಲಿಕ್ಕೆಂದು ಶರ್ಟಿನ ಕಾಲರನ್ನು ಮೇಲೆ ಹಾಕುತ್ತ, "ನಮ್ಮ ಕರ್ಮದ ಫಲಕ್ಕೆ ಪಾಪ . . . . ದೇವರೇನು ಮಾಡಬೇಕು?" ಎಂದು ಕೆಣಕುನಗೆ ವಿಷಾದಗಳಿಂದ ಕೇಳುತ್ತಾನೆ. ಬರ್ಧ ಕಂಟ್ರೋಲವಿಲ್ಲದ ಆ ಕಂಟ್ರೋಲಕಾಲದ ಬಡತನದ ಚಿತ್ರ ಇಲ್ಲಿ ಎಷ್ಟು ಕರುಳಿರಿಯುವಂತೆ ಮೂಡಿದೆ! ಬಡತನಕ್ಕೆ ತುತ್ತಾದವನನ್ನು ಊರ ಮುಖಂಡರು ನೈನ್ಯಕ್ಕೆ ನೇರಿಸಿದ ಚಿತ್ರ 'ನಮ್ಮೂರ ನಾಯಕರು' ಕೊಡುತ್ತದೆ. ಕೆಲಸಕ್ಕೆ ಬಾರದ ಭೂಮಿಯನ್ನು ಉತ್ತು ಬಿತ್ತಿ, ಬಾವಿಯನ್ನು ತೋಡಿ, ಫಲವತ್ತನ್ನಾಗಿ ಮಾಡಿದ ರೈತ ಈರನೊಡನೆ ಜಮೀನದಾರ ಗೌಡರು ಅನ್ಯಾಯದಿಂದ ನಡೆದು ಕೊಂಡರು! ಇದೇ 'ಈರ ಯಾಕೆ ಹೋದ?' ಎಂಬ ಕಥೆಯ ಜೀವವಾಗಿದೆ. ಸುಶಿಕ್ಷಿತನೊಬ್ಬನಿಗೆ ತನ್ನ ಓದುಬರಹ, ಕವಿತ್ವಶಕ್ತಿ, ವಿದ್ಯೆ ಸೌಜನ್ಯಗಳಾವವೂ ಹೊಟ್ಟೆಗೆ ಹಿಟ್ಟನ್ನು ಒದಗಿಸಲಿಲ್ಲ ಚಳಿಯಿಂದ ನಡಗುತ್ತ ಮಲಗಿದ ಮುಪ್ಪಿನ ತಾಯಿಗೆ ಹೊದಿಯಲಿಕ್ಕೆ ಒಂದು ವಸ್ತ್ರವನ್ನು ಸಂಪಾದಿಸಿ ಕೊಡ ಲಿಕ್ಕೆ ಆಗದೆ ಕಳವು ಮಾಡುತ್ತಾನೆ! ಜನರಿಂದ 'ಕಲಿತ ಕಳ್ಳ' ನೆನಿಸಿಕೊಳ್ಳು ತ್ತಾನೆ. ಹಗಲೆಲ್ಲ ಗಂಡಹೆಂಡರಿಬ್ಬರೂ ದುಡಿದು, ಪಡೆದ ಒಂದು ನೇರು ನೆಜ್ಜೆ, ಅವು ತಮಗೂ ತಮ್ಮ ಮಕ್ಕಳಿಗೂ ಹೊಟ್ಟೆಗೆ ಒಂದು ಹೊತ್ತಿಗೂ ನಾಲವೆಂದು ದನ ತಿನ್ನುವ ಬಹಿಮೂಗದ ಹಿಂಡಿಯನ್ನೂ ಕೂಡಿಸಿ ಬೀಸಲೆಂದು

ಯೋಚಿಸಿದ ಆ ಬಡ ಕೂಲಿಕಾರನ ದ್ರೋತರವನ್ನು ಹಿಡಿದೆಳೆದು ಒಕ್ಕಲಿಗ ನೊಬ್ಬನು ಅವನ್ನೂ ನೆಲದ ಪಾಲು ಮಾಡುವನು. ಹಸಿದ ಮಕ್ಕಳು ಆ ಮಣ್ಣು ಪಾಲಾದ ಹಿಂಡಿಯ ಚೂರುಗಳನ್ನೇ ಆರಿಸಿ ಮುಕ್ಕಲು ಹವಣಿಸುವವು! ಗುಡಿಸಲಿನೊಳಗಿಂದ ಹರಕು ಮೊರವೊಂದನ್ನು ತಂದು, ಆ ನೆಜ್ಜಿ ಹಿಂಡಿಗಳನ್ನು ತುಂಬಿಕೊಳ್ಳುವಾಗ ತಮ್ಮ ಅಸಹಾಯ ಸ್ಥಿತಿಯನ್ನು ನೆನೆದು ಆ ಕೂಲಿಯಾಕೆ ಕಣ್ಣೀರು ಹಾಕುವಳು. 'ಆ ಕಣ್ಣೀರು' ರಕ್ತದ ಹನಿಗಳಂತೆ ಲೇಖಕರಿಗೆ ಇಲ್ಲಿ ಕಂಡಿವೆ. ಅತ್ಯಂತ ಮನೋವೇಧಕಾಗಿ ಈ ಚಿತ್ರ ಅಣ್ಣಾರಾಯರ ಲೆಕ್ಕಣಿಕೆಯಿಂದ ಮೂಡಿ ಬಂದಿದೆ. ಇದರಂತೆಯೇ 'ಬೀರನ ಬಾವಿ'ಯಲ್ಲಿ ಊರ ಹಿರಿಯರೆಂಬವರ ಬುದ್ಧಿ ಬಲದ ಆಟದಲ್ಲಿ ಸಿಕ್ಕು ಒದ್ದಾಡುವ ಒಕ್ಕಲಿಗನ ಕರುಣ ಕಥೆಯಿದೆ.

'ಒಗಟು', 'ಕರುಳು'ಗಳು ಮನಸ್ ಚಿತ್ರವನ್ನು ಕೊಡುವ ಕನ್ನಡದ ಶ್ರೇಷ್ಠ ಕತೆಗಳಾಗಿವೆ. ಮಾನವನ ಬದುಕಿನಲ್ಲಿ ಅಜ್ಞಾನವೆಂಬುದು ಸತ್ಯದ ಮೇಲೆ ದಟ್ಟವಾದ ತೆರೆಯನ್ನು ಹಾಕಿದಾಗ ಬಡತನದ ಬಾಳಿನಲ್ಲಿ ಸ್ವಲ್ಪ ಹಣವೂ ಕೂಡ ಎಂಥ ದುರಂತವನ್ನು ತಂದೊಡ್ಡಬಹುದು. ಬಡವರಲ್ಲೂ ಪ್ರಾಮಾಣಿಕತೆಯು ಎಷ್ಟು ಸ್ಪೃಹಣೀಯವಾಗಿರುತ್ತದೆಂಬುದರ ಚಿತ್ರ 'ಒಗಟು' ಕೊಡುತ್ತದೆ. ಜೀವನದ ಸುಖ-ಶಾಂತಿಗೆ ಸನ್ಯಾಸಕ್ಕಿಂತ ಸಹೃದಯಿಯಾದ ಸಂಸಾರಿಕತೆಯೇ ಮಿಗಿಲೆನ್ನುವ ಭಾವವನ್ನು 'ಕರುಳು' ಕರಗುವಂತೆ ಹೇಳುತ್ತದೆ. ಇವೆರಡೂ ಕಥೆಗಳು ಅಣ್ಣಾರಾಯರ ಕಥನಕಲೆಯ ಪರಿಣತಾವಸ್ಥೆಯನ್ನು ವ್ಯಕ್ತಪಡಿಸುತ್ತವೆ.

'ದ್ರೋಹ' ಅಗಸ್ಟ ೧೯೪೨ರ ಕ್ರಾಂತಿಯಲ್ಲಿ, ಮುಂಬೈಯಲ್ಲಿ ನಡೆದ ಘಟನೆಯಲ್ಲಿ, ಸಿಕ್ಕ ಎರಡು ವ್ಯಕ್ತಿಗಳ ಮನಸ್ ಚಿತ್ರವಾಗಿದೆ. ಅದೇ ಕ್ರಾಂತಿಯ ಉಲ್ಬಣತೆಯಲ್ಲಿ ಸಿಕ್ಕ ಒಂದು ಹಳ್ಳಿಯ ಚಿತ್ರ 'ವಿಜಯಶ್ರೀ' ಯಲ್ಲಿದೆ. 'ಸೂರಸಿಂಗ' ಮಹಾಯುದ್ಧದ ರಣಭೂಮಿಯ ಮೇಲೆ ದೇಶ ಪ್ರೇಮವನ್ನು ವ್ಯಕ್ತಪಡಿಸಿದ ಶೂರ ಭಾರತೀಯ ಸೈನಿಕನ ಕಥೆಯಾಗಿದೆ.

'ಗೆಲುವು' ಯವನರ ಅತುಲ ಸೈನಿಕ ಶಕ್ತಿಯನ್ನು ನಂಬಿದ ಸಿಕಂದರನ ಕಣ್ಣುಗಳನ್ನು ಭಾರತೀಯರ ಅಧ್ಯಾತ್ಮಿಕತೆಯು ತೆರೆಯಿಸಿ, ಅದರ ಮುಂದೆ ಸೋಲನ್ನು ಒಪ್ಪಿಕೊಳ್ಳುವ ಸನ್ನಿವೇಶವನ್ನು ಒದಗಿಸುತ್ತದೆ. 'ಪರಿವರ್ತನ'ವು ಭಗವಾನ್ ಮಹಾವೀರನ ಕಾಲದಲ್ಲಿ ಬಾಳಿದ ಸಮ್ರಾಟ್ ಶ್ರೇಣಿಕನ (ಬಿಂಬಿ

ನಾರ) ನ್ಯಾಯನಿಷ್ಠುರತೆಯನ್ನೂ ವೇಶ್ಯೆಯೊಬ್ಬಳ ಹಾಗೂ ಕಳ್ಳನ ಸತ್ಯನಿಷ್ಠೆಯನ್ನೂ ಸುಂದರವಾಗಿ ಚಿತ್ರಿಸುತ್ತದೆ. 'ತಪನಿಧಿ'ಯು ಒಂದು ಕ್ಷೇತ್ರದ ಕಥೆಯಾಗಿದ್ದು, ಕರ್ನಾಟಕದ ಐತಿಹಾಸಿಕ - ಸಂಗತಿಗಳಿಂದ ಕೂಡಿದೆ. ಇದರಲ್ಲಿ ಮಾನವನಿಗೆ ದೈವದ ಮೇಲಿರುವ ಅತುಲ ಶ್ರದ್ಧೆಯ ಮನೋಹರ ಚಿತ್ರವಿದೆ.

ಹೀಗೆ ಅಣ್ಣಾರಾಯರ ಕಲಾಕುಂಚವು ವಿವಿಧ ಸನ್ನಿವೇಶ, ಪಾತ್ರ, ಜೀವನಗಳ ಚಿತ್ರವನ್ನು ಬರೆದಿದೆ. ಇಲ್ಲಿ, ಅವರ ಕಥೆಗಳನ್ನು ಕುರಿತು ನಾಲ್ಕು ಮಾತುಗಳನ್ನು ಮಾತ್ರ ಹೇಳಿದೆ. ಇದು ಅವರ ಕಥನ ಕಲಾಸುಂದರಿಯ ಆರಾಧನೆಯ ಮಂದಿರದ ದ್ವಾರವಿದ್ದಂತೆ. ಇದರಿಂದ ಕನ್ನಡ ವಾಚಕರು ಒಳಗೆ ಪ್ರವೇಶಿಸಿ, ಅಣ್ಣಾರಾಯರ ಕಥೆಗಳ ಭಾವಸೌಂದರ್ಯವನ್ನು ಅನುಭವಿಸಿ, ಹೆಚ್ಚು ಹೆಚ್ಚಾಗಿ ಆನಂದವನ್ನು ಹೊಂದಲೆಂದು ಹಾರೈಸುವೆ.

# 'ಬುದ್ಧನ ಕಥೆ'ಯು ಸಮೀಕ್ಷೆ

ಶ್ರೀ. ಕೆ. ಟಿ. ದೇಶಪಾಂಡೆ, ಎಂ. ಎ., ಜಮಖಂಡಿ.

ಭಾರತೀಯ ಅಧ್ಯಾತ್ಮಿಕ ಹಿರಿಮೆಯನ್ನು ಬೆಳಗಿದ ಹಲವೇ ಮಹಾ ಪುರುಷರಲ್ಲಿ ಭಗವಾನ್ ಬುದ್ಧನೂ ಒಬ್ಬ. ವೈದಿಕ ಧರ್ಮದ ಕರ್ಮಕಾಂಡಕ್ಕೆ ಅವಾಸ್ತವ ಮಹತ್ವ ಪ್ರಾಪ್ತವಾಗಿ, ಅವುಗಳ ಹಿನ್ನೆಲೆಯಲ್ಲಿನ ಅಮೌಲ್ಯ ತತ್ವಗಳ ತಿರುಳು ಮಾಯವಾದಾಗ ಅದಕ್ಕೆ ಕ್ರಾಂತಿಯ ಪ್ರತಿಭಟನೆ ಬರುವದು ಅವಶ್ಯವೇ ಆಗಿತ್ತು ಜನತೆಯ ಮಾರ್ಗದರ್ಶನಕ್ಕಾಗಿ ಬೆಳಕು ನೀಡಿ, ಕೈಹಿಡಿದು ನಡಸುವ ಕರುಣಾಳು ಬೇಕಿತ್ತು. ಧರ್ಮಗ್ಲಾನಿಯಾಗುತ್ತಿದ್ದಾಗ ಭಗವಂತನ ಅವತಾರವನ್ನು ಧರಿತ್ರಿ ದಾರಿಕಾಯುತ್ತಿದ್ದಳು. ಇಂತು ಅಧ್ಯಾತ್ಮಿಕ ರಂಗಭೂಮಿ ಸುಸಜ್ಜಿತವಾಗಿತ್ತು. ಭಗವಂತ ಸಿದ್ಧಾರ್ಥನಾದ; ಸಿದ್ಧಾರ್ಥ ಬುದ್ಧನಾದ. ವಿಶಾಲ ವಿಶ್ವದ ಬಹುದೊಡ್ಡ ಭಾಗದಲ್ಲಿ ಅವನ ಬೋಧನೆಗಳು ಪ್ರಸಾರವಾದವು.

ಇಂಥ ಒಬ್ಬ ಪುಣ್ಯಪುರುಷನ, ಮಾನವೀಯ ಅಂತಃಶಕ್ತಿಗೆ ಸ್ಫೂರ್ತಿ ದಾಯಕನಾದ ಮಹಾನುಭಾವನ ಪಾವನಕಥೆಯನ್ನು ಶ್ರೀ ಮಿರ್ಜಿ ಅಣ್ಣಾ ರಾಯರು ಬಲು ಸೊಗಸಾಗಿ ಹೇಳಿದ್ದಾರೆ. ಪುಟಪುಟದಲ್ಲಿ ಕಥನ ಕೌಶಲ್ಯ ಎದ್ದು ಕಾಣುತ್ತಿದೆ; ನಿರೂಪಣಾ ಲಾಲಿತ್ಯ ಗೋಚರವಾಗುತ್ತದೆ. ಪ್ರತಿ ಶಬ್ದದಲ್ಲೂ ಆ ಭಗವಂತನ ಜೀವನ ಸಂದೇಶ ಸ್ಫುರಣಗೊಳ್ಳುತ್ತಿದೆ. ಒಂದು ವಿಶಿಷ್ಟ ಚೌಕಟ್ಟಿನಲ್ಲಿಯೇ ಕಥೆಯ ನಿಲುವನ್ನು ಕೂಡಿಸಿದ್ದಾರೆ. ಕಥೆ ಹೇಳುವ ವಿಧಾನ ಪ್ರೌಢ ವಿದ್ಯಾರ್ಥಿಗಳಿಗೆ ಹೇಳುವ ರೀತಿಯದು. ಶ್ರೋತೃಗಳು ಪ್ರೌಢರೂ ನಿಜ; ಆದರೆ ಅಷ್ಟೇ ನಿಜ, ಅವರು ವಿದ್ಯಾರ್ಥಿಗಳೆಂಬುದು. ಅಂದರೆ ಜಗತ್ತಿನ ಬಗೆಗೆ ಸಾಮಾನ್ಯ ಅರಿವು ಅವರಿಗಿದೆ. ಅವರ ಬುದ್ಧಿಯೂ ಪ್ರೌಢವಾಗಿದೆ. ಆದರೆ ತೊಡಕಾದ ವಿಷಯಗಳನ್ನು ಬಾಲಕರಿಗೆ ಹೇಳು ವಂತೆಯೇ ಬಿಡಿಬಿಡಿಸಿ ಹೇಳಬೇಕು. ಅಲ್ಲದೆ ವರರು ಹೇಳಿದುದೆಲ್ಲಕ್ಕೂ 'ಅಹುದೆ'ನ್ನುವ ತಲೆಹಾಕಪ್ಪಗಳಲ್ಲ. ವಯಸ್ಸಿನ ಜೊತೆಗೆ ಪ್ರಪಂಚದ ವಿಶಾಲ ಅನುಭವ ಅವರಿಗಿದೆ. ಆ ಅನುಭವದ ಒರೆಗಲ್ಲಿಗೆ ವರರು ಹೇಳಿ ದುದನ್ನು ತಿಕ್ಕಿ ಅದರ ಚೊಕ್ಕಟತನದ ಪರೀಕ್ಷೆಮಾಡುವ ಎದೆಗಾರಿಕೆಯೂ

ಅದೆ. ಇಂಥ ಒಂದು ಜಿಕ್ಕಟ್ಟಿನ ತೊಡಕನ್ನು ಶ್ರೀ ಅಣ್ಣಾರಾಯರು ಲೀಲಾ ಜಾಲವಾಗಿ ಬಿಡಿಸಿದ್ದಾರೆ.

ಈ ಐವತ್ತು ಪುಟಗಳಲ್ಲೂ ಹೆಣೆದ ಕತೆ ರಾತ್ರಿಯ ನಾಲೆಯ ಒಂದು ದಿನದ ಪಾರವಾಗಿದೆ. ಪ್ರಾಸಂಗಿಕ ಸನ್ನಿವೇಶಗಳಿಗನುಸಾರವಾಗಿ ಶಿಕ್ಷಣದ ಪಾರಗಳನ್ನು ಹೊಂದಿಸಿಕೊಳ್ಳಬೇಕೆಂಬ ತತ್ವವನ್ನು ಇಲ್ಲಿ ಕೃತಿಗೆಳೆಯಲಾಗಿದೆ. ವೈಶಾಖ ಶುದ್ಧ ಪೌರ್ಣಿಮೆಯ ಬೆಳದಿಂಗಳ ಇರುಳ ಪ್ರಶಾಂತ ವಾತಾವರಣ. ಬುದ್ಧ ಜಯಂತಿಯ ಪವಿತ್ರ ದಿನ. ಆ ದಿನವೇ ಬುದ್ಧ ಕಥಾನಿರೂಪಣೆಗೆ ಪ್ರೇರಕ. ಅದರೊಂದಿಗೆ ಬುದ್ಧಸ್ಮಾರಕ ಕ್ಷೇತ್ರಗಳ ಯಾತ್ರೆ ಮಾಡುತ್ತ ಬುದ್ಧನ ಜೀವನದ ಘಟನೆಗಳಿಗೆ ಅವನ್ನು ಸಮನ್ವಯಿಸುತ್ತ ಆ ಕ್ಷೇತ್ರಗಳ ಪ್ರಾಚೀನ ವೈಭವ ಹಾಗೂ ಪಾವಿತ್ರ್ಯವನ್ನು ಕೇಳುಗರ ಕಣ್ಣೆದುರಿನಲ್ಲಿ ಹಾಯ್ದುಹೋಗುವಂತೆ ಚಿತ್ರಿಸಲಾಗಿದೆ. ನಮ್ಮ ಆಧುನಿಕ ಕಾಲವೆಲ್ಲ ಐತಿಹಾಸಿಕ ಕಾಲವಾಗಿ ಮಾರ್ಪಡುತ್ತದೆ. ಓದುಗನ ದೃಷ್ಟಿಯಲ್ಲಿ ಈ ಮಾರ್ಪಾಟು ಮಹತ್ತರವಾದುದು. ಇತಿಹಾಸ ಕೇವಲ ಮೃತಭೂತ ಕಾಲವಲ್ಲ; ಜೀವಂತ ಭೂತಕಾಲ; ಅಷ್ಟೇ ಅಲ್ಲ, ಅದು ವರ್ತಮಾನ ವಾಗಬೇಕು. ಇತಿಹಾಸದ ಘಟನೆಗಳು ನಿರ್ದಿಷ್ಟಪಡಿಸಿದ ಸ್ಥಳಗಳಲ್ಲಿ ಹುಟ್ಟಿ, ಬೆಳೆದು ನೈಸರ್ಗಿಕ ಕೊನೆಯನ್ನು ಕಾಣಬೇಕು. ಗಯಾ, ಸಾರನಾಥ, ಪಾವಾ ಮೊದಲಾದ ಸ್ಥಳಗಳು ಕೇವಲ ಸ್ಥಾನನಿರ್ದೇಶಕ ವಸ್ತುಗಳಾಗದೆ ಬುದ್ಧನ ಕಾಲದ ಸಮಾಜ ಜೀವನವನ್ನು ಅದರ ಸರ್ವಸೌಂದರ್ಯ ಕುರೂ ಪತೆಗಳಲ್ಲಿ ಚಿತ್ರಿಸುವ ಜೀವಂತ ಹಿನ್ನೆಲೆಗಳಾಗಿವೆ. ಥಾಮಸ್ ಹಾರ್ಡಿ ಹಾಗೂ ಕಾರಂತರ ಕಾದಂಬರಿಗಳಲ್ಲಿಯಂತೆ ಈ ಎಲ್ಲ ಸನ್ನಿವೇಶಗಳಲ್ಲೂ ಜೀವಸಂಚಾರದ ಮಿಡಿತವನ್ನೂ ನಾವು ಗುರುತಿಸಬಹುದಾಗಿದೆ. ಬುದ್ಧ ಜೀವನದ ಪ್ರತಿಯೊಂದು ಘಟ್ಟವೂ ತನ್ನ ಶ್ರೋತೃಗಳ ಬೇಕು-ಬೇಡಗಳ ಇತಿಮಿತಿಯನ್ನರಿತುಕೊಂಡೇ ನಿರೂಪಿಸಲ್ಪಟ್ಟಿದೆ. ಇದರಿಂದ ಬುದ್ಧನ ಸಂದೇಶದ ತಿರುಳು ಜನಸಾಮಾನ್ಯರಿಗೆ ಸುಲಭವೇದ್ಯವಾಗಲು ಸಾಧ್ಯವಾಗಿದೆ.

ಇಡೀ ಕತೆ ಸಂಭಾಷಣಾರೂಪದಲ್ಲಿದ್ದರೂ "ನಮ್ಮ ಕಡೆಯ ಮಾತಿನ ರೀತಿಯನ್ನು ಮೊದಲು ಕಲಿತುಕೊಳ್ಳಿ; ಆ ಮೇಲೆ ಇದನ್ನು ಓದುವಿರಂತೆ!" ಎಂಬ ದುರಾಗ್ರಹಕ್ಕೆ ಇಲ್ಲಿ ಎಡೆಯಿಲ್ಲ. ಸಂಭಾಷಣಾರೀತಿ ಹರಿದು ಹಂಚಿ ಹೋದ ಕನ್ನಡನಾಡಿನ ಪ್ರತೀಕವಾಗಿಲ್ಲ; ಒಗ್ಗೂಡಿದ ಕನ್ನಡದ ದ್ಯೋತಕ

ವಾಗಿದೆ. ಈ ಸುರಸ ಶೈಲಿಯ ಪ್ರವಾಹ ನಮ್ಮನ್ನು ಕೊಚ್ಚಿಕೊಂಡು ಹೋಗುತ್ತದೆ. ಮಾತಿನ ಮಾರ್ದವ, ಹೇಳುವ ರೀತಿಯ ಸೊಗಸು, ಅಂತರಾಳದಲ್ಲಿ ಮೆದುವಾಗಿ ಹರಿಯುತ್ತಿರುವ ಹಾಸ್ಯದ ಝುರಿ, ಬುದ್ಧ ಜೀವನದ ಮಹತ್ತನ್ನು ಎತ್ತಿ ಹೇಳುವದರಲ್ಲಿ ಅತ್ಯಂತ ಸಹಾಯಕವಾಗಿವೆ. ಗದ್ಯ ಕೇವಲ ಹೃದ್ಯವಷ್ಟೇ ಅಲ್ಲ, ಸ್ವಾದ್ಯವೂ ಆಗಿದೆ: "ಬಲ್ಸೊಗಸು, ಬಲ್ಸೊಗಸು ನೀನೆಂದ ಕತೆ" ಎಂಬ ನುಡಿ ಭಟ್ಟಂಗಿಯ ಹೊಗಳಿಕೆಯಲ್ಲ. ವಾಸ್ತವಿಕ ಪರಿಣಾಮದ ಸರಳ ನುಡಿ.

ಭಾರತದ ಸಂಕ್ರಾಂತಿ ಕಾಲದಲ್ಲಿ ಭಾರತೀಯ ಮಹಾಪುರುಷನೊಬ್ಬನ ಜೀವನದ ಸಾರಸರ್ವಸ್ವವನ್ನು ರಸವತ್ತಾಗಿ ಹೇಳಿ, ಕನ್ನಡಿಗರ ಕೈಗಿಟ್ಟುದು ಯಥೋಚಿತವಾಗಿದೆ. ಆ ಮಹಾನುಭಾವ ಹೊತ್ತಿಸಿದ ಬೆಳಕಿನ ಜಾಡು ಹಿಡಿದು, ಭಾರತವು ಆತ್ಮಿಕ ಉನ್ನತಿಯನ್ನು ಸಾಧಿಸಿಕೊಳ್ಳಬೇಕಾಗಿದೆ. ಅದರಲ್ಲೂ ಚಿಕ್ಕ ಮಕ್ಕಳಿಗೆ ಈ ಹೊತ್ತಿಗೆ ಅತ್ಯಂತ ಪ್ರಯೋಜನಕಾರಿ ಯಾಗಿದೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು ನಮ್ಮ ಜೀವನದ ನೈತಿಕ ಮೌಲ್ಯಗಳು ಅವನತಿಯ ದಾರಿಯನ್ನು ಹಿಡಿದ ಈ ಸಂಕ್ರಮಣ ಕಾಲದಲ್ಲಿಯ ಬಾಲಕರು ಶಿಸ್ತುಗೇಡಿಗಳೆಂಬ ಬಿರುದನ್ನು ದೊರಕಿಸುತ್ತಿದ್ದ ಈ ವೇಳೆಯಲ್ಲಿ ಬಾಲಕರಲ್ಲಿಯ ನೈತಿಕ ಮೌಲ್ಯಗಳ ಪುನರುತ್ಥಾನಕ್ಕೆ ಬುದ್ಧನ ಸಂದೇಶ ಅಗತ್ಯವಾಗಿದೆ. ಗಂಟುಗಂಟಾದ ಇಂದಿನ ಸಾಮಾಜಿಕ ಸಮಸ್ಯೆಗಳ ಜಟಿಲತೆಯನ್ನು ಸೂಕ್ಷ್ಮವಾಗಿ ಅರಿತು ನಿವಾರಿಸುವ ಧೀಃಶಕ್ತಿ ಹಾಗೂ ಆತ್ಮಸಾಮರ್ಥ್ಯ ಬುದ್ಧ ಜೀವನದಿಂದ ನಮಗೆ ಹರಿದು ಬರಬೇಕಾಗಿದೆ ಜಾತೀಯ ಹಾಗೂ ಪ್ರಾಂತೀಯ ಸಂಕುಚಿತ ಮನೋಭಾವನೆಗಳನ್ನು ಪ್ರಚೋದಿಸಿ, ಅವಕ್ಕೆ ರಾಷ್ಟ್ರೀಯ ಸ್ವರೂಪ ಕೊಟ್ಟು ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳಲು ಹೊಂಚುಹಾಕಿ ರಾಷ್ಟ್ರೀಯತೆಗೆ ಸಂಚಕಾರ ತರಬಯಸುವ "ಢೋಂಗೀ ಮುತ್ಸದ್ದಿ"ಗಳ ಅಂತರಂಗದ ರಂಗ ಅಂಗಳಕ್ಕೆ ಬಂದು, ಪ್ರಾಮಾಣಿಕ ರಾಷ್ಟ್ರೀಯ ವೃತ್ತಿಯ ವಿಕಾಸಕ್ಕೆ ಬುದ್ಧ ಸಂದೇಶ ಪೋಷಕ ವಾಗಬೇಕಾಗಿದೆ. ಈ ದೃಷ್ಟಿ 'ಬುದ್ಧನ ಕಥೆ'ಯಲ್ಲಿ ತುಂಬ ಹರಿದಿದೆ. 'ಬುದ್ಧನ ಕಥೆ'ಗೆ ರಾಷ್ಟ್ರಪತಿಗಳಿಂದ ಪ್ರಶಸ್ತಿಪತ್ರ ದೊರಕಿರುವದು ಅದರ ಹಿರಿಮೆಗೆ ಸಾಕ್ಷಿ. ಶ್ರೀ ಮಿರ್ಜಿ ಅಣ್ಣಾರಾಯರಿಂದ ನಾಡಿಗೆ ಇಂಥ ಅಮೌಲ್ಯ ರಸದೂಟ ಪ್ರಾಪ್ತವಾಗಲೆಂದು ಹಾರೈಸುವೆ.

# ಭಾರತದ ಬೆಳಕಿನಲ್ಲಿ

ಶ್ರೀ. ವೀ. ವರ್ಧಮಾನ ಹೆಗ್ಗಡೆ, ಧರ್ಮಸ್ಥಳ.

ಸುಪ್ರಸಿದ್ಧ ಕಾದಂಬರಿಕಾರರಾದ ಶ್ರೀ ಮಿರ್ಜಿ ಅಣ್ಣಾರಾಯರು ತಮ್ಮ ಬಹುಮೂಲ್ಯಕೃತಿ 'ಭಾರತದ ಬೆಳಕು' ಈ ಗ್ರಂಥದಲ್ಲಿ ಧರ್ಮಮಾರ್ಗಿ, ಭಾರತದ ದಿವ್ಯಜ್ಯೋತಿ, ಮಹಾತ್ಮಾ ಪುರುಷರ ಮಹೋನ್ನತ ವ್ಯಕ್ತಿತ್ವವನ್ನು ಏಕಾಂಕ ನಾಟಕ ಶೈಲಿಯಲ್ಲಿ ಬಹಳ ದಿವ್ಯಭವ್ಯ ಚಿತ್ರಗಳನ್ನು ವಿಸ್ತಾರವಾಗಿ ಕೊಟ್ಟು, ನಮ್ಮೆಲ್ಲರ ಹೃದಯದಲ್ಲಿ ಆ ಮಹಾಮಹಿಮರ ದಿವ್ಯ ಜೀವನವು ಅಚ್ಚೊತ್ತಿದಂತೆ ಮಾಡಲು ಬಹಳ ಸಾಹಸಪಟ್ಟಿದ್ದಾರೆ. ಅವರ ಕಾದಂಬರಿಯ ಶೈಲಿಯಲ್ಲೊಂದು ವಿಶಿಷ್ಟ ರೀತಿನೀತಿಯಿದೆ. ಅದು ನಮ್ಮನ್ನು ಸಾವಿರಾರು ವರ್ಷಗಳ ಹಿಂದಕ್ಕೆ ಕರೆದುಕೊಂಡು ಹೋಗಿ, ಅಂದಿನ ಮಹಾತ್ಮರ ದಿವ್ಯ ಮನೋರಂಗದ ಅಮೌಲ್ಯ ಮಾತುಗಳನ್ನು ಹೊರಡಿಸಿ, ಇಂದಿನವರು, ಪವಿತ್ರ ಬಾಳನ್ನು ಬಾಳಲು ಪ್ರೇರಣೆ ನೀಡುತ್ತಿದೆ.

ಒಂದನೆಯ ಚಿತ್ರವು, ಭಗವಾನ್ ಮಹಾವೀರ ಸ್ವಾಮಿಯ ದಿವ್ಯಭವ್ಯ ಜೀವನವನ್ನು ಪಾವಾಪುರಿ ಕ್ಷೇತ್ರದ ದರ್ಶನಕ್ಕೆ ನಮ್ಮನ್ನು ಕರೆದೊಯ್ದು ರಸವತ್ತಾಗಿ ಮೂಡಿಸಿ ತೋರಿಸುವಂತಿದೆ. ಎರಡನೆಯ ಚಿತ್ರ ಶ್ರವಣ ಬೆಳ್ಗೊಳ ಮಹಾಕ್ಷೇತ್ರದ ದರ್ಶನದಿಂದ ಮೂಡಿಬಂದಿದ್ದು, ಶ್ರೀಭದ್ರಬಾಹು ಚಂದ್ರಗುಪ್ತ ಮುನೀಂದ್ರರ ಪವಿತ್ರ ಜೀವನವನ್ನು ಪ್ರತಿಫಲಿಸುತ್ತಿದೆ. ಮೂರನೆಯದರಲ್ಲಿ ಶ್ರುತಪಂಚಮಿಯ ಮಹತ್ವವನ್ನು ಕುರಿತೂ, ಧವಳಾದಿ ಗ್ರಂಥಗಳ ನಿರ್ಮಾಣಕರಾದ ಭಗವಂತ ಪುಷ್ಪದಂತ ಭೂತಬಲಿಗಳ ಚರಿತ್ರೆಯನ್ನು ಅದಕ್ಕೆ ಸಮನ್ವಯಿಸಿಯೂ ಗ್ರಂಥ ನಿರ್ಮಿತಿಯ ಸಂದರ್ಭವನ್ನು ಸೇರಿಸಿ, ರಸವತ್ತಾಗಿ ಚಿತ್ರಿಸಿ ಯಶಸ್ವಿಗಳಾಗಿದ್ದಾರೆ. ನಾಲ್ಕನೆಯ ಚಿತ್ರದಲ್ಲಿ, ಕುಂದಕುಂದಾದ್ರಿ ಪರ್ವತದಲ್ಲಿ ಪರಮಪೂಜ್ಯ ಆಚಾರ್ಯ ಕುಂದಕುಂದಾಚಾರ್ಯರ ಅಧ್ಯಾತ್ಮ ಸಾಧನೆಯ ಮಹಾ ತಪಧಾರಣೆಯ ದಿವ್ಯ ಚಿತ್ರಗಳೊಡನೆ ಸ್ಥಳ ಚರಿತ್ರೆಯ ವರ್ಣನೆಯನ್ನು ಸೇರಿಸಿ, ತಮ್ಮ ಕಲಾಕುಂಚವನ್ನು ಆಡಿಸಿದ್ದಾರೆ. ಇವೆಲ್ಲ ಚಾರಿತ್ರಿಕ ಅಂಶಗಳನ್ನು ಅನೇಕರು ತಿಳಿದಿರಲಿಕ್ಕಿಲ್ಲ. ಧರ್ಮಾಭಿಮಾನಿಗಳು ಹೃದಯ ಪೂರ್ವಕವಾಗಿ, ಹಿಂದಿನ ಮಹಾತ್ಮರ ಪರಮಪಾವನ

ಜೀವನ ಚಿತ್ರಗಳನ್ನು ಓದುತ್ತ ಹೋದ ಹಾಗೆ ತಲೆ ಭಕ್ತಿಯಿಂದ ತಾನಾಗಿಯೇ ಬಾಗುವುದು. ಇದು ಅಣ್ಣಾರಾಯರ ಶೈಲಿಯ ವೈಶಿಷ್ಟ್ಯ, ಪ್ರಭಾವ.

ಸಿದ್ಧಾಂತ ಚಕ್ರವರ್ತಿ ಶ್ರೀ ನೇಮಿಚಂದ್ರಾಚಾರ್ಯರು ಮತ್ತು ಧರ್ಮ ಮೂರ್ತಿ ಚಾಮುಂಡರಾಯರೊಳಗಿನ ಆದರ್ಶ ಗುರುಶಿಷ್ಯತ್ವವನ್ನು ಕುರಿತು ಬರೆದ ದಿವ್ಯ ವ್ಯಕ್ತಿಚಿತ್ರ ಉತ್ತಮವಾಗಿದೆ. ಶ್ರೀ ಬಾಹುಬಲಿ ಸ್ವಾಮಿ ಮೂರ್ತಿ ಪ್ರತಿಷ್ಠೆಯ ಸುಸಂದರ್ಭದಲ್ಲಿ, 'ಷಟ್‌ಖಂಡಾಗಮ'ದ ಪೂರ್ಣ ಅಭ್ಯಾಸಿಯಾದ ಮಹಾಮುನಿ ನೇಮಿಚಂದ್ರರಿಗೆ 'ಸಿದ್ಧಾಂತ ಚಕ್ರವರ್ತಿ' ಎಂಬ ಮಹಾಪದವೀದಾನ ಸಮಾರಂಭವು ನೆರವೇರಿಸಿದ ದೃಶ್ಯ, ಬಹು ಹೃದಯಸ್ಪರ್ಶಿಯಾಗಿದೆ. ವಿದ್ಯಾಲಯದ ಅಭ್ಯಾಸದಲ್ಲಿ ಪದವಿ ಪಡೆಯುವದ ಕ್ಕಿಂತಲೂ 'ಗೊಮ್ಮಟಸಾರ'ದಂಥ ಶ್ರೇಷ್ಠ ಗ್ರಂಥರಚನೆಯಲ್ಲಿ ತನ್ನ ಮಹಾ ವ್ಯಕ್ತಿತ್ವವನ್ನು ತೋರುವವರು ಮಹಾಪ್ರಾಜ್ಞರೆಂಬ ಭಾವವು ಇಲ್ಲಿ ಮೂಡಿದೆ. ಇದು ಯಥಾರ್ಥ ಸತ್ಯವನ್ನೇ ಸಾರುತ್ತಿದೆಂಬುದರಲ್ಲಿ ಸಂದೇಹವಿಲ್ಲ. ಮುಂದಿನ ವ್ಯಕ್ತಿಚಿತ್ರವು ಕರ್ನಾಟಕದ ಭಕ್ತಿಭಂಡಾರಿಗಳೂ ವಿಶ್ವವಂದ್ಯರೂ ಆದ ಬಸವಣ್ಣನವರನ್ನು ಕುರಿತದ್ದಾಗಿದೆ. ಅದು ಆ ಕಾಲದ 'ಅನುಭವ ಮಂಟಪ'ದ ದರ್ಶನವನ್ನು ನಮಗೆ ಮಾಡಿಸುತ್ತದೆ. ಆ ಮೇಲೆ ಪರಮಪವಿತ್ರ ಶ್ರೀ ಶಾಂತಿ ಸಾಗರರ ಚರಿತ್ರವನ್ನು ವಿವರಿಸಿ, ಜೈನ ನಿರ್ಗ್ರಂಥ ಮುನಿಗಳ ಅಧ್ಯಾತ್ಮ ಸಾಧನೆಯ ಪರಿಚಯ ಮಾಡಿಕೊಟ್ಟಿದ್ದಾರೆ. ಪೂಜ್ಯ ಗಾಂಧೀಜಿಯವರಿಗೆ ಧಾರ್ಮಿಕ ದಿವ್ಯಜೀವನದ ಮರ್ಮವನ್ನು ಪವಿತ್ರತಮ ತಮ್ಮ ಜೀವನದಿಂದ ತೋರಿದ ಮಹಾಯೋಗಿ ರಾಯಚಂದರ ಶತಾವಧಾನದ ದಿವ್ಯಶಕ್ತಿಯೊಡನೆ ಆತನ ಅಧ್ಯಾತ್ಮಸಾಮರ್ಥ್ಯದ ಸನ್ನಿವೇಶಗಳನ್ನೂ ಸೇರಿಸಿ, ಬಹು ವಿಸ್ತಾರವಾಗಿ ಹೃದಯಂಗಮವಾಗಿ ವಿವರಿಸಿದ್ದಾರೆ. ಅವರು ಬರೆ ಮೂವತ್ತೆರಡು ವರ್ಷಗಳ ಆಯುಷ್ಯದಲ್ಲಿ ತೋರಿದ ಅಧ್ಯಾತ್ಮದ ಪ್ರಗತಿಯು ಜಗತ್ತಿನ ಚರಿತ್ರೆಯಲ್ಲಿ ಅಪೂರ್ವವೆಂದರೆ ಅತಿಶಯೋಕ್ತಿಯಾಗಲಾರದು. ಇಂಥ ಮಹಾತ್ಮರ ಜೀವನ ದಿಂದ, ನಾವು ನಮ್ಮ ಅಂತರಾತ್ಮನ ದಿವ್ಯಶಕ್ತಿಯನ್ನು ತಪಃಸಾಧನೆಯಿಂದ ಬೆಳೆಯಿಸಿಕೊಳ್ಳಲು ಪ್ರೇರಣೆ ಸಿಗುತ್ತದೆ. ಪೂಜ್ಯ ಗಾಂಧಿಜೀಯವರ ದರ್ಶನ ವನ್ನು ಅಣ್ಣಾರಾಯರು ಪಡೆದ ವೃಶ್ಯವೂ ಹೃದಯಂಗಮವಾಗಿ ಇಲ್ಲಿ ಮೂಡಿ ಬಂದಿದೆ. ಅಂತೆಯೇ ಶ್ರೀ ಧರ್ಮಸ್ಥಳದ ಮಂಜಯ್ಯ ಹೆಗ್ಗಡೆಯವರ ದಿವ್ಯಸನ್ನಿಧಿ ಯಲ್ಲಿ ಈ ಲೇಖಕರು ಕಳೆದ ಒಂದು ದಿನವು ಅತ್ಯುತ್ತಮವಾಗಿ ಚಿತ್ರಿಸಲ್ಪಟ್ಟಿದೆ.

"ಭಾರತದ ಇತಿಹಾಸದಲ್ಲಿ ಹಲವೊಮ್ಮೆ ಮಿಂಚಿನಂತೆ ಸುಳಿದಿರುವ ಕೆಲವು ವ್ಯಕ್ತಿಗಳ ಜೀವನಚಿತ್ರ ಸ್ಪಷ್ಟವಾಗಿ ದೊರೆಯದು. ಅದರಲ್ಲೂ ಜೈನ ಪರಂಪರೆಯಲ್ಲಿ ಪ್ರಮುಖ ವ್ಯಕ್ತಿಗಳ ಚಿತ್ರ ಬಹಳ ಅಸ್ಪಷ್ಟ. ಇತಿಹಾಸದಲ್ಲಿ ಸಾಕಷ್ಟು ಆಧಾರ ದೊರೆಯದ ಇಂತಹ—ಅನೇಕರ ಜೀವನದ ಬಗ್ಗೆ ಕಟ್ಟುಕತೆಗಳು ಬೇಕಾದಷ್ಟಿವೆ. ಸಿಕ್ಕಷ್ಟು ಆಧಾರಗಳ ಮೇಲೆ ಐತಿಹಾಸಿಕ ಸತ್ಯಕ್ಕೆ ಕೊಂಕುತರದೆ, ತಮ್ಮ ಅನುಭವ ಜ್ಞಾನದ ಕುಂಚದಿಂದ ಇಂತಹ ಕೆಲವು ವ್ಯಕ್ತಿಗಳ ಚಿತ್ರವನ್ನು ಆದಷ್ಟೂ ಸ್ಪಷ್ಟವಾಗಿ ಈ ಗ್ರಂಥದಲ್ಲಿ ಚಿತ್ರಿಸಲು ಯತ್ನ ನಡೆದಿದೆ, ಶ್ರೀ ಮಿರ್ಜಿ ಅಣ್ಣಾರಾಯರಿಂದ."* ಅದರಿಂದ ಇಂಥವರ ಕುಶಲ ಲೆಕ್ಕಣಿಕೆಯಿಂದ ಇನ್ನೂ ಹೆಚ್ಚು ಹೆಚ್ಚಾಗಿ ವ್ಯಕ್ತಿಚಿತ್ರಗಳು ಕನ್ನಡ ಲೋಕಕ್ಕೆ ಲಭಿಸಲೆಂದು 'ಭಾರತದ ಬೆಳಕ'ನ್ನು ಓದಿದ ಯಾರಿಗೂ ಎನಿಸದಿರದು. ಇವರು ಹೃತ್ಪೂರ್ವಕವಾಗಿ ಮಹಾವ್ಯಕ್ತಿಗಳ ಜೀವನವನ್ನು ಅನುಭವಿಸಿ ಚಿತ್ರಿಸುವುದರಿಂದ ಅವು ಓದುಗರ ಹೃದಯವನ್ನು ನೇರವಾಗಿ ಸೇರುತ್ತವೆ. ಇದು ನಮ್ಮ ಶಾಲಾಬಾಲಕರು ಓದಲು ಅತ್ಯಂತ ಉಪಯುಕ್ತ ಪುಸ್ತಕವಾಗಿದೆ.

---

* "ಕನ್ನಡ ನುಡಿ" ಮೇ ೧೯೫೬.

# ಮುಹಮ್ಮದ ಪೈಗಂಬರರು

ಶ್ರೀ. ಪಿ. ಕೆ. ನಾರಾಯಣ, ವಿದ್ವಾನ್, ಮಂಗಳೂರು.

೧

ಹಿರಿಯ ಸಾಹಿತಿಗಳಾದ ಮಿರ್ಜಿ ಅಣ್ಣಾರಾಯರು ಕಿರಿಯರಿಗಾಗಿ ಬರೆದ ಕಿರಿಹೊತ್ತಗೆ **ಮುಹಮ್ಮದ ಪೈಗಂಬರರು.** ಸಣ್ಣಕತೆಗಾರರಾಗಿ ಸಾಹಿತ್ಯಪ್ರಪಂಚಕ್ಕೆ ಕಾಲಿರಿಸಿದ ಮಿರ್ಜಿಯವರು ತಮ್ಮ ಪ್ರಥಮ ಕಾದಂಬರಿ 'ನಿಸರ್ಗ'ದಲ್ಲಿ ಸಾಹಿತ್ಯದಲ್ಲವರಿಗಿರುವ ಪ್ರಭುತ್ವವನ್ನು ಸ್ಥಾಪಿಸಿರುವುದನ್ನು ಸಹೃದಯರು ಕಾಣಬಹುದು. ಮುಂದೆ ಅವರ ಸಾಹಿತ್ಯತಪಸ್ಸು ಲಲಿತ ಸಾಹಿತ್ಯ ರಚನೆಯ ಹೊಲವನ್ನು ಬಿಟ್ಟು ಗಹನವಾದ ಧಾರ್ಮಿಕ ಸಾಹಿತ್ಯ ರಚನೆಯತ್ತ ಸರಿಯಿತು. ಜೈನಧರ್ಮದಂತಹ ಬೃಹತ್ ಗ್ರಂಥವನ್ನು ಕನ್ನಡ ಜನರಿಗಿತ್ತರು. ಇಂತಹ ಹಿರಿಯ ಸಾಹಿತಿ ರಚಿಸಿದ ಈ ಕಿರಿ ಹೊತ್ತಗೆಯಲ್ಲೂ ಹಿರಿಯಗುಣಗಳಿವೆಯೆಂದು ಹಿರಿಯರಾದ ವಾಚಕರು ಭಾವಿಸಿ ಓದಿದರೆ ಅವರ ಭಾವನೆ ತಪ್ಪಾಗದು.

ಶ್ರೀ ಮಿರ್ಜಿ ಅಣ್ಣಾರಾಯರು ೪೯ ಪುಟಗಳ ಈ ಕಿರಿಹೊತ್ತಗೆಯಲ್ಲಿ ಮಹಾಪುರುಷರಾದ ಮುಹಮ್ಮದ ಪೈಗಂಬರರ ಜೀವನಚಿತ್ರವನ್ನು ಸಂಗ್ರಹವಾಗಿ ಬರೆದಿರುವರು. ಪೂರ್ವ ಪೀಠಿಕೆಯಲ್ಲಿ "ಒಂದು ದೇಶದ ಸ್ಥಿತಿಯು ಕೆಟ್ಟಾಗ, ಸಾಮಾಜಿಕ ಜೀವನವು ಹಳಸಿದಾಗ, ಅದನ್ನು ಸುಧಾರಿಸಲಿಕ್ಕೆಂದು ಮಹಾಪುರುಷರ ಜನ್ಮವಾಗುತ್ತಿರುತ್ತದೆ; ಧರ್ಮಕ್ಕೆ ಹಾನಿಯುಂಟಾಗುವಾಗ ಭಗವಂತನ ಅವತಾರವಾಗುವುದು; ದೇವದೂತನ ಆಗಮನವಾಗುವುದು" ಎಂದು ಮೊದಲು ಮಾಡಿ ಮುಂದೆ ಮುಹಮ್ಮದರ ಜನ್ಮ, ಬಾಲ್ಯ ಮತ್ತು ಬೆಳವಣಿಗೆ, ವೈವಾಹಿಕ ಜೀವನ, ಧ್ಯಾನ ಮತ್ತು ದರ್ಶನ, ಇಸ್ಲಾಂ ಮತ ಸ್ಥಾಪನೆ, ಮದೀನಾದಲ್ಲಿ ಮುಹಮ್ಮದರು, ಧರ್ಮದ ಹೆಸರಿನಲ್ಲಿ ಯುದ್ಧ, ಅರಬಸ್ಥಾನದ ರಾಷ್ಟ್ರೀಯ ಧರ್ಮ ಇಸ್ಲಾಂ, ಮುಹಮ್ಮದರ ಮಹಾನಿರ್ಯಾಣಗಳನ್ನು ಮನಮುಟ್ಟುವಂತೆ ಬರೆದು "ಅರಬಸ್ಥಾನದ ಆಕಾಶದಿಂದ ಮಹಾತೇಜಃಪುಂಜವಾದ ನಕ್ಷತ್ರವೊಂದು ಅಸ್ತವಾಯಿತು. ಆದರೇನು? ಅದರ ಪ್ರಕಾಶವು ಸೂರ್ಯಚಂದ್ರರಿರುವ ವರೆಗೂ ಭೂಮಿಯನ್ನು ಬೆಳಗುವುದು;

ಭೂಲೋಕದ ಬಾಳಬಟ್ಟೆಯಲ್ಲಿ ಬೆಳಕನ್ನು ಬೀರುತ್ತಿರುವುದು” ಎಂದು ಸಾರಿದ್ದಾರೆ.

೨

ಅರಬಸ್ತಾನದ ಮುಖ್ಯ ಪಟ್ಟಣ ಮಕ್ಕಾ. ಅಲ್ಲಿ ಕುರೇಶ್ ಮನೆತನ ಬಹಳ ದೊಡ್ಡದು. ಇಂಥಾ ಹಿರಿಮನೆತನದಲ್ಲಿ ಅಬ್ದುಲ್ಲಾ ಹಾಗೂ ತಾಯಿ ಅಮೀನಾ ಇವರ ಹೊಟ್ಟೆಯಿಂದ ಮುಹಮ್ಮದರು ಜನಿಸಿದರು. ಮುಹಮ್ಮದರು ಹುಟ್ಟುವ ಪೂರ್ವದಲ್ಲಿ ಆರು ತಿಂಗಳು ಮೊದಲೇ ಅಬ್ದುಲ್ಲಾ ದೈವಾಧೀನ ರಾದರು. ತಾಯಿ ಅಮೀನಾ ಒಂದು ವಾರವೂ ಕೂಡ ಮುಹಮ್ಮದರಿಗೆ ಮೊಲೆ ಕುಡಿಸಲಿಲ್ಲ. ಸಾಕುತಾಯಿ ಮೊಲೆಕೊಟ್ಟರೂ ಆಕೆ ಹೆಚ್ಚು ಕಾಲ ಬದುಕಲಿಲ್ಲ. ಅನಾಥ ಮಗು ಮುಹಮ್ಮದರನ್ನು ತಾತಂದಿರಾದ ಅಬ್ದುಲ್ ಮುತಲ್ಲಿಬ್‌ರೆಂಬವರು ಸಂರಕ್ಷಿಸಿದರು. ಮುಹಮ್ಮದರಿಗೆ ಎಂಟು ವರ್ಷ ವಾಗುವಾಗಲೆ ತಾತಂದಿರು ತೀರಿಕೊಂಡರು. ಆ ಮೇಲೆ ಅವರನ್ನು ಕಕ್ಕಂದಿ ರಾದ ಅಬುತಾಲಬರು ಜೋಕೆಮಾಡಿದರು.

ಹತ್ತು ವರ್ಷ ವಯಸ್ಸಿನಲ್ಲಿ ಕುರಿಗಳನ್ನು ಕಾಯುತಿದ್ದ ಮುಹಮ್ಮದರು ದೊಡ್ಡವರಾಗಲು ಕಕ್ಕನ ವ್ಯಾಪಾರವ್ಯವಹಾರಗಳಿಗಾಗಿ ಸುತ್ತಲಿನ ಸೀಮೆ ಗಳಲ್ಲಿ ಸುತ್ತಾಡಿದರು. ವಿವಿಧ ಭಾಗಗಳ ಸಾಮಾಜಿಕ, ಧಾರ್ಮಿಕ, ರಾಜ ಕೀಯ ಜೀವನಗಳನ್ನು ನೋಡುವುದರಿಂದ ಅವರ ಅನುಭವ ವಿಶಾಲ ವಾಯಿತು. ನಡೆನುಡಿಗಳಲ್ಲಿ ಪ್ರಾಮಾಣಿಕತೆ ಮೈಗೂಡಿತು. ಇದನ್ನು ಕಂಡು ಆ ಊರಲ್ಲಿಯ ಪ್ರತಿಷ್ಠಿತ ಮನೆತದವಳೂ ಸಿರಿವಂತಳೂ ಆದ ಖದೀಜಾಯೆಂಬ ವಿಧವೆಯು ತನ್ನ ಆಸ್ತಿ, ವ್ಯವಹಾರಗಳ ಮೇಲ್ವಿಚಾರಣೆಗೆಂದು ಇವರನ್ನು ನೇಮಿಸಿದಳು. ಮುಹಮ್ಮದರ ಗುಣಗಳಿಗೆ ಮುಗ್ಧಳಾದ ಖದೀಜಾ ಮಹಮ್ಮದರನ್ನು ಮದುವೆಯಾದಳು. ಈ ಮದುವೆಯ ತರುವಾಯ ಮಹಮ್ಮದರು ಖದೀಜಾಳ ಸಂಪತ್ತಿಗೆ ಒಡೆಯರಾದರು. ಆದರೆ ಅವರು ಸಿರಿಸಂಪತ್ತುಗಳ ಮೋಹಕ್ಕೆ ಒಳಗಾಗಲಿಲ್ಲ. ಸಮಯ ಸಾಧಿಸಿ ಧ್ಯಾನ ಮಾಡುವರು; ಲೋಕಕಲ್ಯಾಣವನ್ನು ಚಿಂತಿಸುವರು; ವ್ಯವಹಾರ ಆಧ್ಯಾತ್ಮ ಗಳೆರಡನ್ನೂ ಸಮನ್ವಯಗೊಳಿಸುವರು.

ಇಂಥ ಪ್ರಯತ್ನದಲ್ಲಿದ್ದಾಗಲೆ ಅವರು ಪರದೇಶದ ಪ್ರವಾಸಿಗಳನ್ನು ಸಂರಕ್ಷಿಸುವ ಸಂಘವನ್ನು ಸ್ಥಾಪಿಸಿದರು. ಅದಕ್ಕೆ ಮಕ್ಕಾದೊಳಗಿನ ಮುಖ್ಯ

ವ್ಯಾಪಾರಸ್ಥರೆಲ್ಲ ಸದಸ್ಯರಾದರು. ಈ ಸಂದರ್ಭದಲ್ಲಿ ದೇವರ ಮೂರ್ತಿಯನ್ನು ಸ್ಥಳಾಂತರಗೊಳಿಸಿ ಪ್ರತಿಷ್ಠಿಸುವ ವಿಚಾರದಲ್ಲಿ ಕುರೇಶ್ ಮನೆತನದಲ್ಲಿ ಒಂದು ಒಳಜಗಳವುಂಟಾಯಿತು. ಮುಹಮ್ಮದರು ಅದನ್ನು ಉಪಾಯದಿಂದ ತಪ್ಪಿಸಿದರು. ವೈಯಕ್ತಿಕ ಜೀವನದಲ್ಲೂ ಮಹಮ್ಮದರು ಬಹು ನಿಷ್ಠಾವಂತರಾಗಿದ್ದರು. ವ್ಯಾಪಾರಿಗಳು ಖದೀಜೆಗೆ ಕಾಣಿಕೆಯಾಗಿ ಕೊಟ್ಟ ಜೈದಳನ್ನು ಆಕೆ ಮುಹಮ್ಮದರಿಗೆ ಒಪ್ಪಿಸಿದಳು. ಅವರು ಆ ಗುಲಾಮ ಹೆಣ್ಣಿನೊಂದಿಗೆ ಬಹು ಗೌರವದಿಂದ ನಡೆದುಕೊಂಡರು. ಅದರಿಂದ ಜೈದಳ ತಂದೆ ಬಂದು ಕರೆದರೂ ಆಕೆ ಮುಹಮ್ಮದರನ್ನು ಬಿಟ್ಟು ಹೋಗಲಿಲ್ಲ.

ಮುಹಮ್ಮದ ಪೈಗಂಬರರ ಮನಸ್ಸು ವಿಶ್ವದ ಗುಟ್ಟನ್ನು ಕಂಡುಹಿಡಿಯುವುದರಲ್ಲಿ ಮಗ್ನವಾಯಿತು. ಅವರು "ಹಿರಾ" ಎಂಬ ಗುಡ್ಡದ ಗುಹೆಯೊಂದರಲ್ಲಿ ಧ್ಯಾನಮಾಡುತಿದ್ದರು. ಹಲವು ದಿನಗಳ ಉಪವಾಸವನ್ನೂ ಕೈಕೊಂಡರು ಅವರು ಹದಿನೈದು ವರ್ಷಗಳ ಕಾಲ ತಪಸ್ಸು ಮಾಡಿದರು. ರಮಜಾನ ತಿಂಗಳ ಒಂದು ದಿನ ಮುಹಮ್ಮದರು ಧ್ಯಾನಮಗ್ನರಾಗಿದ್ದರು. ಅಂತಃಪ್ರಕಾಶ ಹೊರಹೊಮ್ಮಿತು. ಕೆಲ ದಿನಗಳ ಮೇಲೆ ಅವರಿಗೆ ಸ್ಪಷ್ಟವಾಗಿ ಪರಮಾತ್ಮನ ಆಜ್ಞೆಯಾಯಿತು. "ಏಳು! ಜಗತ್ತಿಗೆ ಸಾರಿ ಹೇಳು" ಎಂದು ಕೇಳಿತು.

"ಅಲ್ಲಾಃನಲ್ಲಿ ಶಾಂತಿಯೇ ವಾಸ್ತವಿಕವಾಗಿ ಧರ್ಮವು. ಪ್ರೇಮವೇ ಸೃಷ್ಟಿಗೆ ಮೂಲಕಾರಣವು. ಎಲ್ಲರನ್ನೂ ಪ್ರೀತಿಸು." ಆಗ ಪೈಗಂಬರರಿಗೆ ನಲವತ್ತು ವರ್ಷ ವಯಸ್ಸು. ಅಂದಿನಿಂದ ಅವರು ಪೈಗಂಬರರಾದರು. ಅವರ ಜ್ಞಾನವು ಪರಮಪವಿತ್ರವಾದ "ಕುರಾಣ"ದಲ್ಲಿ ಮುಂದೆ ಸಂಗ್ರಹಿಸಲ್ಪಟ್ಟಿತು ಆ ಮೇಲೆ ಅವರು ತಮ್ಮ ವಿಚಾರಗಳ ಪ್ರಸಾರಕ್ಕೆ ತೊಡಗಿದರು. ಅದೇ "ಇಸ್ಲಾಂ" ಧರ್ಮವೆನಿಸಿತು. ಇಸ್ಲಾಂ ಎಂದರೆ ಶಾಂತಿಯು. ವಿಶ್ವವ್ಯಾಪಿಯಾದ ಶಾಂತಿಯನ್ನು ಪ್ರಚಾರಗೊಳಿಸಲು ಜಗತ್ತಿನಲ್ಲಿ ಜನಿಸಿ ಬಂದ ಕೊನೆಯ ಪ್ರವಾದಿ ಎಂದು ಮುಹಮ್ಮದರನ್ನು ಇಸ್ಲಾಂಧರ್ಮೀಯರು ಭಾವಿಸುತ್ತಾರೆ. ಆದರೆ ಮುಹಮ್ಮದರಿಗೆ ತಾನು ಕಂಡ ಸತ್ಯವನ್ನು ಪ್ರಚಾರ ಮಾಡಲು ಬಹಳ ಕಷ್ಟವಾಯಿತು. ಮೂರು ವರ್ಷಗಳಲ್ಲಿ ಮುಹಮ್ಮದರ ಅನುಯಾಯಿಗಳ ಸಂಖ್ಯೆ ಇಪ್ಪತ್ತರ ಒಳ ಹೊರಗೇ ಇತ್ತು. ಅವರಲ್ಲಿ ಮೊದಲನೆಯವಳು ಮುಹಮ್ಮದರ ಹೆಂಡತಿ ಖದೀಜಾ; ಇನ್ನೊಬ್ಬಳು ಜೈದ,

ಮೂರನೆಯವನು ಅಬೂತಾಲಿಬನ ಮಗ ಆಲೀ. ಉಳಿದವರೆಲ್ಲ ಸಾಮಾನ್ಯ ಬಡವರು, ಕೂಲಿಕಾರರು.

ಮುಹಮ್ಮದ "ಕಅಬಾ" ದೇವಸ್ಥಾನಕ್ಕೆ ಬರುವ ಯಾತ್ರಿಕರಿಗೆ ತಮ್ಮ ನವೀನಮತವನ್ನು ಬೋಧಿಸತೊಡಗಿದರು. ವಿವಿಧ ದೇವತೆಗಳ ಪೂಜೆ ತಕ್ಕುದ್ದಲ್ಲವೆಂದು ಸಾರಿದರು. ಇದರಿಂದ ಕುರೇಶರು ಕೋಪಗೊಂಡರು. ಅವರು ಉಪದೇಶಿಸುವಲ್ಲಿ ಹೋಗಿ ಕಲ್ಲೆಸೆದು ಗೊಂದಲ ಎಬ್ಬಿಸಿದರು. ಮುಹಮ್ಮದರ ಕೊಲೆಗೆ ಯತ್ನಿಸಿದರು. ಆದರೆ ಅವರು ತಮ್ಮ ಕಾರ್ಯದಿಂದ ವಿಚಲಿತರಾಗಲಿಲ್ಲ. ಇಸ್ಲಾಂ ಧರ್ಮವನ್ನು ಸ್ವೀಕರಿಸಿದವರನ್ನೂ ಪೀಡಿಸ ತೊಡಗಿದರು. ಯಾಸಿರ ಮತ್ತು ಸಮಿಯಾ ದಂಪತಿಗಳನ್ನು ಬರ್ಚಿಗಳಿಂದ ಚುಚ್ಚಿಚುಚ್ಚಿ ಕೊಂದರು. "ಕುಬೈದ"ನೆಂಬ ಮುಹಮ್ಮದ ಅನುಯಾಯಿ "ಜಗತ್ತನ್ನೇ ಬಿಡುವೆ; ಇಸ್ಲಾಂ ಧರ್ಮ ಬಿಡಲಾರೆ" ಎಂದು ತನ್ನ ಜೀವನವನ್ನೇ ಅರ್ಪಿಸಿದನು.

ಹೀಗೆ ಮಕ್ಕಾನಗರದಲ್ಲಿ ನೂರರ ವರೆಗಿರುವ ತಮ್ಮ ಅನುಯಾಯಿಗಳಿಗೆ ನಷ್ಟಕಷ್ಟಗಳು ಉಂಟಾದಾಗ ಮುಹಮ್ಮದರು ಅವರನ್ನು ಆಫ್ರಿಕದ ದೊರೆಯ ಬಳಿಗೆ ಕಳುಹಿಸಿ ರಕ್ಷಿಸಿದರು. ಇದರಿಂದ ಕುರೇಶರು ಇನ್ನಷ್ಟು ಕೆರಳಿದರು. 'ಉಮರ'ನೆಂಬ ತರುಣನನ್ನು ಮುಹಮ್ಮದರ ಕೊಲೆಗಾಗಿ ಪ್ರಚೋದಿಸಿದರು. ಅವನು ಕಿರಿಗತ್ತಿಯನ್ನು ಹಿಡಿದುಕೊಂಡು ರೋಷದಿಂದ ಧಾವಿಸಿದನು. ಇಸ್ಲಾಂ ಮತಕ್ಕೆ ಸೇರಿದ ತನ್ನ ತಂಗಿಯನ್ನೂ, ತಂಗಿಯ ಗಂಡನನ್ನೂ ಮೊದಲು ಕೊಲ್ಲುವುದೆಂದು ಬಗೆದು ಅಲ್ಲಿಗೆ ನಡೆದನು. ಕೊಲೆಗೆಂದು ಹೋದ ಉಮರನು ತಂಗಿಯ ಭಕ್ತಿಯಿಂದ ಎಚ್ಚರಗೊಂಡನು. "ಮುಹಮ್ಮದರು ಈಶ್ವರನ ರಸೂಲರು. ಅವರಿಂದ ನನಗೂ ಇಸ್ಲಾಂ ದೀಕ್ಷೆ ಕೊಡಿಸು" ಎಂದು ಬೇಡುವಂತಾದನು.

ಇದರ ಅನಂತರ ಮುಹಮ್ಮದರನ್ನು ಪ್ರೀತಿಸುವ, ಸಂರಕ್ಷಿಸುವ ಹಿರಿಯರು ಹೆಚ್ಚಿದರು. ಕುರೇಶರೊಳಗೇ ಇತ್ತಂಡವಾಯಿತು. ಮುಂದೆ ಮುಹಮ್ಮದರು "ತಾಯಿಫ" ಎಂಬ ಪಟ್ಟಣವನ್ನು ತನ್ನ ಕಾರ್ಯಕ್ಷೇತ್ರವಾಗಿ ಮಾಡಿಕೊಂಡರು. ಅಲ್ಲಿಗೆ ಜೈದಳೊಂದಿಗೆ ಹೋದರು. ಅಲ್ಲಿಯ ಜನರೂ ಮುಹಮ್ಮದರ ಮೇಲೆ ಬಿದ್ದರು. ಹೀಗಿರುವಾಗ ಯಸರೇಬ ನಗರದ ಯಾತ್ರಿಕರಲ್ಲಿ ಆರು ಜನರು ಇಸ್ಲಾಂ ಧರ್ಮ ಸ್ವೀಕರಿಸಿದರು. ಅನಂತರ

ಮಹಮ್ಮದರೂ ಯಸರೀಬಕ್ಕೇ ಹೋದರು. ಆಗ ಕುರೇಶರು ಅವರ ಕೊಲೆಗಾಗಿ ಮಹಾ ಪ್ರಯತ್ನಮಾಡಿ ಸೋತರು. ಯಸರೀಬದ ಜನರು ಮಹಮ್ಮದರನ್ನು ಸ್ವಾಗತಿಸಿದರು. ಅಂದಿನಿಂದ ತಮ್ಮ ನಗರಕ್ಕೆ "ಮದೀನ ತುನ್ನಬೀ" ಎಂದರೆ ದೇವದೂತನ ಪಟ್ಟಣ ಎಂಬ ಹೆಸರಿಟ್ಟರು.

ಮದೀನಾದಲ್ಲಿ ಮಹಮ್ಮದರು ತಮ್ಮ ಧರ್ಮಪ್ರಚಾರ ಮಾಡಿದರು. "ಇಸ್ಲಾಂವು ಜಗತ್ತಿಗೆ ಹೊಸ ಧರ್ಮವಲ್ಲ. ಅದು ಸನಾತನ ಧರ್ಮವು ನನ್ನಂಥ ದೇವದೂತರು ಹಲವರು ಭೂಮಿಯ ಮೇಲೆ ಈ ಮೊದಲೇ ಹುಟ್ಟಿ, ಅಲ್ಲಿನ ಧರ್ಮವನ್ನು ಬೋಧಿಸಿ ಹೋಗಿದ್ದಾರೆ. ಅವರೆಲ್ಲರೂ ಹೇಳಿದ ಸತ್ಯ ಒಂದೇ, ಅದೇ ಇಸ್ಲಾಂವು." "ಸತ್ಯವಚನ, ಒಳ್ಳೆಯ ನಡತೆ, ವಿನಯಶೀಲತೆ, ದಯಾಭಾವಗಳಲ್ಲಿ ಸ್ವರ್ಗದ ಬೀಗದ ಕೈಯಿದೆ. ನಮ್ಮ ಆಚರಣೆಯಿಂದ ನಾವು ಸ್ವರ್ಗಸುಖವನ್ನು ಪಡೆಯಬೇಕು." ಇದನ್ನು ಕೇಳಿ ನೂರಾರು ಜನರು ಇಸ್ಲಾಂಧರ್ಮವನ್ನು ಸ್ವೀಕರಿಸಿದರು. ಮದಿನಾದ ಜನರು ಮಹ ಮ್ಮದರನ್ನೇ ತಮ್ಮ ಪಟ್ಟಣದ ಆಡಳಿತೆಗಾರರೆಂದು ಗೊತ್ತುಮಾಡಿದರು. ಈ ಹೊಣೆಯನ್ನು ಹೊತ್ತ ಮಹಮ್ಮದರು ಎಲ್ಲರನ್ನೂ ಸಮಾನ ರೀತಿಯಿಂದ ನಡೆಸಿಕೊಂಡರು. ಎಲ್ಲ ಧರ್ಮದವರೂ ತಮ್ಮ ಧರ್ಮವನ್ನು ಮುಸಲ್ಮಾನ ರಷ್ಟೇ ಸ್ವಾತಂತ್ರ್ಯರೀತಿಯಿಂದ ಆಚರಿಸಲು ಅಡ್ಡಿಯಿಲ್ಲದೆ ಮಾಡಿದರು. ಮಹಮ್ಮದರಿಂದ ಮದೀನಾ ನಗರದ ಮಹತ್ವವು ಹೆಚ್ಚಿತು.

ಮಹಮ್ಮದರು ಮದೀನಾಕ್ಕೆ ಬಂದು ಸಲಸಿದ ಎರಡು ವರ್ಷಗಳಲ್ಲೇ ಕುರೇಶರು ಸಾವಿರಾರು ಸೈನಿಕರೊಂದಿಗೆ ಮದಿನೆಯನ್ನು ಮುತ್ತಲು ಬಂದರು. ಆಗ ಮಹಮ್ಮದರು ಮುನ್ನೂರಹದಿಮೂರು ಮಂದಿ ಅನುಯಾಯಿ ಗಳೊಂದಿಗೆ ಕುರೇಶರೊಂದಿಗೆ ಕಾದಾಡಿ ಅವರನ್ನು ಸೋಲಿಸಿದರು. ಸೋತ ಕುರೇಶರು ಮರುವರುಷವೂ ಯುದ್ಧಕ್ಕೆ ಸಾಗಿಬಂದರು. ಆಗಲೂ ಮಹ ಮ್ಮದರಿಗೆ ಗೆಲವಾಯಿತು. ಆದರೂ ಕುರೇಶರು ತಮ್ಮ ಕುಹಕತನ ಬಿಡಲಿಲ್ಲ. ಮುಂದೆ ಅಬೂ ಸೂಫಿಯಾ ಎಂಬ ಸರದಾರನು ಹತ್ತುಸಾವಿರ ಸೈನ್ಯದೊಡನೆ ಬಂದನು. ಮಹಮ್ಮದರು ಮದೀನಾ ನಗರವನ್ನು ಕಂದಕ ಗಳಿಂದ ಭದ್ರಗೊಳಿಸಿ, ಕುರೇಶರಿಗೆ ನೀರು ಸಿಗದಂತೆ ಮಾಡಿದರು. ಸೋತು ಹೋದ ಕುರೇಶರು ಮುಂದೆ ಎರಡು ವರ್ಷಗಳಲ್ಲಿ ಮುಸಲ್ಮಾನರೊಂದಿಗೆ ಗೌರವದ ಒಪ್ಪಂದ ಮಾಡಿಕೊಂಡರು.

ಈ ಒಪ್ಪಂದದಂತೆ ಮಹಮ್ಮದರು ತಮ್ಮ ಸಾವಿರ ಜನ ಅನುಯಾಯಿ ಗಳೊಂದಿಗೆ ಮಕ್ಕಾನಗರವನ್ನು ವೈಭವದಿಂದ ಪ್ರವೇಶಿಸಿದರು. ಮೂರು ದಿನಗಳ ವರೆಗೆ ನಗರದಲ್ಲೆಲ್ಲ ಹಬ್ಬವೇ ಹಬ್ಬ. ಈ ಹೊತ್ತಿಗೆ ಆಫ್ರಿಕಕ್ಕೆ ಕಳುಹಲ್ಪಟ್ಟವರು ಪುನಃ ಮಕ್ಕಾನಗರಕ್ಕೆ ಬಂದರು. ಮಕ್ಕಕ್ಕೆ ಬಂದ ಮೇಲೆ ಮಹಮ್ಮದರು ಗಡಿಯ ಮೇಲಿನ ಜನರ ಸ್ವಾತಂತ್ರ್ಯಕ್ಕಾಗಿ ರೋಮನ್‌ರ ಕೂಡ ಯುದ್ಧಹೂಡಿ ವಿಜಯಗಳಿಸಿದರು. ಈ ವಿಜಯದಿಂದ ಮಹಮ್ಮ ದರು ಅಂತರ್‍ರಾಷ್ಟ್ರೀಯ ವ್ಯಕ್ತಿಯೆನಿಸಿದರು. ಇಸ್ಲಾಂ ಅರಬಸ್ಥಾನದ ರಾಷ್ಟ್ರೀಯ ಧರ್ಮವೆನಿಸಿತು. ಅರಬಸ್ತಾನದ ಜನರು ನಿರಾಕಾರ ನಿರ್ಗುಣ ಪರಮೇಶ್ವರನೊಬ್ಬನನ್ನೇ ಆರಾಧಿಸಹತ್ತಿದರು.

ಮಹಮ್ಮದರಿಗೆ ಅರವತ್ತೆರಡು ವರ್ಷಗಳು ತುಂಬಿದುವು. ಇನ್ನು ತನ್ನ ಕಾರ್ಯ ಮುಗಿಯಿತೆಂದು ಅವರಿಗೆ ಎನಿಸಿತು. ಅದರಂತೆ ಅವರ ದೇಹವೂ ಶಕ್ತಿಹೀನವಾಯಿತು. ಒಂದು ದಿನ ಮಸೀದಿಗೆ ಹೋದ ಮಹಮ್ಮ ದರು, ತನ್ನಿಂದ ಯಾರಿಗಾದರೂ ತೊಂದರೆಯಾಗಿದ್ದರೆ ಅದಕ್ಕಾಗಿ ಶಿಕ್ಷೆ ಅನುಭವಿಸಲು ಸಿದ್ಧನೆಂದು ಕೇಳಿದರು. ಆದರೆ ಅವರ ಮಾತಿಗೆ ಉತ್ತರವೇ ಬರಲಿಲ್ಲ.

"ಅಣ್ಣ ತಮ್ಮಂದಿರೆ! ಮರಣಕ್ಕೆ ಹೆದರಬಾರದು. ಹಿಂದಿನವರು ನಮ್ಮ ಮುಂದೆಯೇ ಹೋಗಲಿಲ್ಲವೇ? ಹಾಗೆಯೇ ನಾವೆಲ್ಲರೂ ಅವರ ದಾರಿಯಲ್ಲಿ ಹೋಗುವುದು. ಸತ್ಯವಂತರಾಗಿ ಬಾಳಬೇಕು. ಅಂಥವರಿಗೆ ಪರಲೋಕ ದಲ್ಲಿಯೂ ಸುಖವು ಕಾದಿದೆ" ಎಂದವರು ತನ್ನವರಿಗೆ ತಿಳಿಸಿದರು. ಮಹಮ್ಮದ ರಿಗೆ ಜ್ವರವೇರಿತು. ಆಗ ಅವರ ಬಳಿಗೆ ಕುಳಿತ ಎರಡನೇ ಹೆಂಡತಿ ಕಣ್ಣೀರು ಸುರಿಸತೊಡಗಿದರು. ಮಹಮ್ಮದರಾಗ ಎರಡು ಮಾತುಗಳನ್ನು ಉಸುರಿ ದರು—"ಪರಮಾತ್ಮನ ಮೇಲೆ ಶ್ರದ್ಧೆ ಇದ್ದವರು ಯಾರು ಹೀಗೆ ಅಳುವುದಿಲ್ಲ. ನಮ್ಮ ಕಷ್ಟಗಳು ನಮ್ಮ ಪಾಪದ ಪ್ರಾಯಶ್ಚಿತ್ತಗಳು. ದೇವರ ಸೇವಕರನ್ನು ಒಂದು ಮುಳ್ಳಮೊನೆಯೂ ಕೂಡ ನೋಯಿಸಲಾರದು. ದೇವನಲ್ಲಿಯ ವಿಶ್ವಾಸ ಕಡಿಮೆಯಾದಂತೆ ದುಃಖ, ಕಷ್ಟಗಳು ಹೆಚ್ಚುತ್ತ ಹೋಗುವವು." ಆರು ದಿನಗಳಿಂದ ಅನ್ನನೀರು ಇಲ್ಲದೆ ಉಪವಾಸವಿದ್ದ ಅವರು ತನ್ನ ಹೆಂಡತಿಯು ಹತ್ತಿರವಿದ್ದ ಧನವನ್ನೆಲ್ಲ ದಾನಮಾಡಲು ಹೇಳಿದರು. ಮರುದಿನ ಸೋಮ ವಾರ ಮಸೀದಿಗೆ ಹೋಗಿ ಪ್ರಾರ್ಥನೆ ಸಲ್ಲಿಸಿ ಬಂದರು. ಅದೇ ಅವರ

ಕೊನೆಯ ನಮಾಜ! ಮುಂದೆ ಅವರು ಪರಮಾತ್ಮನನ್ನು ಪ್ರಾರ್ಥಿಸುವದು ಪರಮಾತ್ಮನಿಂದ ಭಿನ್ನರೂಪದಲ್ಲಿ ಉಳಿದರಲ್ಲವೆ?

೩

ಇಂತಹ ಮಹಾಪುರುಷರ ಕಥೆಯನ್ನು ಮಿರ್ಜಿಯವರು ಕನ್ನಡನಾಡಿನ ಕಂದರಿಗಾಗಿ ಸರಳವಾದ ಭಾಷೆಯಲ್ಲಿ ಬರೆದಿದ್ದಾರೆ.

ಮಹಮ್ಮದ ಪೈಗಂಬರರ ಜೀವನದ ರೋಮಾಂಚಕಾರಿ ಘಟನೆಗಳನ್ನು ರಸವತ್ತಾಗಿ ಚಿತ್ರಿಸಿದ್ದಾರೆ. ಮಹಮ್ಮದರ ಅನುಯಾಯಿಯಾದ "ಕುಬೈಬ" ಧರ್ಮದ ಸಲುವಾಗಿ ತನ್ನ ಜೀವನವನ್ನೇ ಸಮರ್ಪಿಸಿದ ಸಂದರ್ಭ, ಉಮರನು ಅವರ ಕೊಲೆಗಾಗಿ ಹೋದವನು, ತಂಗಿಯನ್ನು ಕೊಲೆಗೈಯಲು ಉದ್ಯುಕ್ತನಾದಾಗ ಆಕೆಯ ಪ್ರಶ್ನೆಯಿಂದ ಜಾಗೃತನಾದ ಉಮರನು ರಸೂಲರ ಅನುಯಾಯಿಯಾಗುವ ಸಂದರ್ಭಗಳು ರಸವತ್ತಾಗಿ ಹೃದಯಸ್ಪರ್ಶಿಯಾಗಿವೆ.

ಮಿರ್ಜಿಯವರು ಸರಳಸ್ವಭಾವದ ಉನ್ನತ ಧಾರ್ಮಿಕ ಸ್ನಾತಕರು. ಉನ್ನತ ಜ್ಞಾನದ ಸರಳಜೀವನದಿಂದ ವಿಶಾಲವಾದ ಹೃದಯ ಅವರದು.

ಸರ್ವಧರ್ಮ ಸಮನ್ವಯ ಭಾವನೆಯುಳ್ಳ ಈ ಸಾಹಿತಿಗಳು ಮಹಮ್ಮದ ಪೈಗಂಬರರ ಜೀವನವನ್ನು ಒಂದಿಷ್ಟೂ ಕೊರತೆಯಿಲ್ಲದಂತೆ ಬರೆದಿದ್ದಾರೆ. ಇದರಂತೆ ಇತರ ಬರಹಗಾರರು ಇತರ ಧರ್ಮೀಯ ಮಹಾಪುರುಷರ ಕಥೆಗಳನ್ನು ಬರೆದು ಪ್ರಚಾರಮಾಡಿದರೆ ನಿಜವಾಗಿ ಇಂದಿನ ಸಮಾಜಕ್ಕೆ ಹಿಡಿದ ಜಾತೀಯತೆ ದೂರವಾದೀತು. ಸಮನ್ವಯಭಾವ ಬೆಳೆದುಬಂದೀತು. ಈ ದೃಷ್ಟಿಯಿಂದ ಮಿರ್ಜಿಯವರ ಈ ಕಿರುಹೊತ್ತಗೆ ಉತ್ತಮ ಪುಸ್ತಕವಾಗಿದೆ. ಸಮುದ್ರದ ನೀರನ್ನು ಕೊಡದಲ್ಲಿ ತುಂಬಿಸಿ ತಂದರೂ ಆ ನೀರಿನ ಸರ್ವ ಗುಣವೂ ಈ ಕೊಡದಲ್ಲೂ ಇದೆ. ಮಹಮ್ಮದ ಪೈಗಂಬರರ ವಿಷಯಕ್ಕೆ ಕನ್ನಡದಲ್ಲಿ ಇರುವ ಸಾಹಿತ್ಯ ತೀರ ಕಡಿಮೆ. ಇಂತಹ ಸಂದರ್ಭದಲ್ಲಿ ಈ ಹೊತ್ತಗೆಯನ್ನು ಬರೆದ ಮಿರ್ಜಿಯವರು ಅಭಿನಂದನೀಯರು. ಇಂದು ಕಿರಿ ಹೊತ್ತಗೆಯನ್ನು ಬರೆದ ಮಿರ್ಜಿಯವರು ಮುಂದೆ ಬೃಹತ್‌ಗ್ರಂಥವನ್ನು ಬರೆಯಲಿ! ಅಷ್ಟರ ವರೆಗೆ ಈ ಕಿರುಹೊತ್ತಗೆಯೇ ಮಕ್ಕಳ ಮನದ ಆಗಸದಲ್ಲಿ ಕಿರುತಾರೆಯಂತೆ ಮಿನುಗುವುದು!

# ಅಪೂರ್ವ ಗ್ರಂಥ: "ಮಹಾಪುರುಷ"

ಶ್ರೀ. ಜಿ. ಬ್ರಹ್ಮಪ್ಪ, ಎಂ. ಎ., ಶಿವಮೊಗ್ಗ.

ಶ್ರೀ. ಮಿರ್ಜಿಯವರು ಆಧುನಿಕ ಸುಪ್ರಸಿದ್ಧ ಕಾದಂಬರಿಕಾರರು. ಪೂಜ್ಯ ಮಂಜಯ್ಯ ಹೆಗ್ಗಡೆಯವರ ವ್ಯಕ್ತಿತ್ವಕ್ಕೆ ಕಲೆಯ ಬೆಡಗನ್ನು ತಂದು ಕೊಡಲು ಈ ಗ್ರಂಥದಲ್ಲಿ ಪ್ರಯತ್ನಿಸಿದಾರೆ. ಹೊಸಗನ್ನಡ ಸಾಹಿತ್ಯದಲ್ಲಿ ಈ ಗ್ರಂಥಕ್ಕೆ ಅಪೂರ್ವ ಸ್ಥಾನವಿದೆ ಪ್ರತ್ಯಕ್ಷವಾಗಿ ಹೆಗ್ಗಡೆಯವರನ್ನು ಆಗಾಗ ಲೇಖಕರು ದರ್ಶಿಸಿ ಆ ಸಂದರ್ಭಗಳಲ್ಲಿ ತಮ್ಮಲ್ಲುಂಟಾವ ಭಾವೋದ್ರೇಕಕ್ಕೆ ಈ ಗ್ರಂಥದಲ್ಲಿ ಬಣ್ಣಕಟ್ಟಿ ಕಲೆಯ ಬೆಡಗುಬಿನ್ನಾಣಗಳಿಂದ ಚಿತ್ರಿಸಿರುವರು. ಜೊತೆಗೆ ಹಲವಾರು ವ್ಯಕ್ತಿಗಳು ಹೆಗ್ಗಡೆಯವರ ಬಗ್ಗೆ ತಳೆದ ಸದಭಿಪ್ರಾಯಗಳನ್ನೂ ಲೇಖಕರು ಪ್ರತ್ಯಕ್ಷ ಕೇಳಿ ಅವನ್ನೂ ಇಲ್ಲಿ ಹೃದಯ ಸ್ಪರ್ಶಿಯಾಗುವಂತೆ ಮೂಡಿಸಿರುವರು. ಒಬ್ಬ ವ್ಯಕ್ತಿಯ ಬಗ್ಗೆ ಹಲವಾರು ಜನ ಹೇಳಿದುದನ್ನು ಕಲೆಯ ಸೊಬಗಿಂದ ಚಿತ್ರಿಸಿರುವ ಮೊದಲು ಗ್ರಂಥವೆಂದರೆ ಕನ್ನಡದಲ್ಲಿ ಶ್ರೀ. ತ. ರಾ. ಸು. ರವರ ಹಂಸಗೀತೆ. ಆದರೆ ಅಲ್ಲಿ ಲೇಖಕರಿಗೆ ಕಥಾನಾಯಕನ ಪ್ರತ್ಯಕ್ಷ ಪರಿಚಯವಿಲ್ಲ. ಮಹಾಪುರುಷದಲ್ಲಾದರೋ ಹೆಜ್ಜೆಹೆಜ್ಜೆಗೂ ಹೆಗ್ಗಡೆಯವರನ್ನು ಕಂಡು, ಅವರೊಡನೆ ಮಿಳಿತವಾಗಿ ಅವರ ಪ್ರಭಾವಕ್ಕೆ ಸಿಕ್ಕಿ ಅವರ ಭವ್ಯತಮ ಬಾಳಿಗೆ ಮಿರ್ಜಿಯವರು ಮಾರುಹೋಗಿರುವುದನ್ನು ಯಾರು ಬೇಕಾದರೂ ನೋಡಬಹುದು.

ಲೇಖಕರು ಹೆಗ್ಗಡೆಯವರನ್ನು ಮೊಟ್ಟಮೊದಲು ಭೆಟ್ಟಿಯಾಗಲಿರುವ ಸಂದರ್ಭ ಗಮನಿಸಬೇಕಾದುದು ಡ್ರೈವರ್ ಹೇಳುವಂತೆ "ಇಲ್ಲಿಯ ವರೆಗೆ ತಾವು ನಿರ್ಜೀವ ಮೂರ್ತಿಗಳ ದರ್ಶನ ಮಾಡಿದಿರಿ. ಇನ್ನು ಸಜೀವ ಮೂರ್ತಿಯ ದರ್ಶನ ಪಡೆಯಬೇಕು. ಜೀವಂತ ಜಿನಮೂರ್ತಿ– ಹೆಗ್ಗಡೆಯವರು – ಧರ್ಮಸ್ಥಳದಲ್ಲಿದ್ದಾರೆ!" ಈ ಮಾತನ್ನು ಕೇಳಿ ಲೇಖಕರ ಕುತೂಹಲ ಇಮ್ಮಡಿಸಿರಬೇಕು. ಇಮ್ಮಡಿಸುವುದರ ಜೊತೆಗೆ ಭಕ್ತಿ ನೂರ್ಮಡಿಸಿದ್ದರೂ ಆಶ್ಚರ್ಯವಿಲ್ಲ.

ಧರ್ಮಸ್ಥಳದಲ್ಲಿ ಷಡ್ರಸಭೋಜನವಾದ ಮೇಲೆ ಲೇಖಕರು ತಮ್ಮ ಗುಂಪಿನೊಡನೆ ಮಲಗಿ ನಿದ್ರೆಯ ನಂತರ ಮೇಲೆದ್ದು ಹೆಗ್ಗಡೆಯವರ ಬಗ್ಗೆ ಸೇವಕನನ್ನು ಕೇಳುವಾಗ "ಇಲ್ಲ ಸ್ವಾಮಿ, ಅವರು ಮಧ್ಯಾಹ್ನದಲ್ಲಿ ಎಂದೂ

ಮಲಗುವುದಿಲ್ಲ. ಇರುಳು ಒಂದೆರಡು ತಾಸು ನಿದ್ರೆಮಾಡುವರೋ ಇಲ್ಲವೋ! ಭೂಭಾರವನ್ನು ಹೊತ್ತ ಆದಿಶೇಷನಿಗೆ ನಿದ್ರೆಯೆಲ್ಲಿ ಸ್ವಾಮಿ? ಅವನು ಸ್ವಲ್ಪ ತೂಕಡಿಸಿದರೂ ನಾವು ಹೋಗಿಬಿಟ್ಟೇವಲ್ಲ!" ಎಂದು ವಿವರಿಸುವನಂತೆ. ಹೆಗ್ಗಡೆಯವರ ಸಾನಿಧ್ಯ ಸೇವಕನ ಮಾತಿನಲ್ಲಿ ಕಾವ್ಯ ಬರಿಸಿದೆ. ಹೆಗ್ಗಡೆಯವರ ವ್ಯಕ್ತಿತ್ವದ ಪೂರ್ಣಚಿತ್ರ ಸೇವಕನ ಒಂದೇ ವಾಕ್ಯದಲ್ಲಿ ಅಡಗಿದೆ.

16ನೇ ಪುಟದಲ್ಲಿ ರೋಮಾಂಚನಕಾರಿಯಾದ ಸಂದರ್ಭವಿದೆ. ಕಾರಿನವನನ್ನು ಕಾರಲ್ಲಿ ಕುಳಿತು ಧರ್ಮಸ್ಥಳಕ್ಕೆ ಹೋದವರೆಲ್ಲ ಮರೆತು ಉಂಡು ಮಲಗಿ ವಿಶ್ರಾಂತಿಹೊಂದಿದರಂತೆ! ಮರಳಿ ಧರ್ಮಸ್ಥಳವನ್ನು ತೊರೆದು ಪ್ರಯಾಣಮಾಡುವಾಗ ದಾರಿಯಲ್ಲಿ ಜ್ಞಾಪಿಸಿಕೊಂಡು ಆದ ಅಚಾತುರ್ಯಕ್ಕೆ ಪಶ್ಚಾತ್ತಾಪ ಬೀಳುವಾಗ "ಬೇಡ ತಾಯಿ, ಆ ಪುಣ್ಯಾತ್ಮನ ಧರ್ಮದಿಂದ ಧರ್ಮಸ್ಥಳದಿಂದ ಯಾರೂ ಊಟವಿಲ್ಲದೆ ಹಿಂದಿರುಗುವಂತಿಲ್ಲ ...... ಇಳಿಹೊತ್ತಿನಲ್ಲಿ ಸ್ವತಃ ಹೆಗ್ಗಡೆಯವರೇ ಹೊರಗೆ ಬಂದು ವಿಚಾರಿಸಿ ಕಾಫಿ ಫಲಹಾರಗಳನ್ನು ಕಳಿಸಿಕೊಟ್ಟರು. **ಈಗ ಒಂದು ತುತ್ತು ತಿಂದೇವೆಂದರೂ ಹೊಟ್ಟೆಯಲ್ಲಿ ಸ್ಥಳವಿಲ್ಲ"** ಹೆಗ್ಗಡೆಯವರ ಸರ್ವವ್ಯಾಪಕತ್ವ ಯಾರನ್ನಾದರೂ ರೋಮಾಂಚನಗೊಳಿಸದಿರದು. ತನ್ನ ದರ್ಶನಕ್ಕೆ ಬಂದ ಭಕ್ತರು ಸೇವಕನನ್ನು ಮರೆತಾಗ ಭಕ್ತರ ಬಂಟನನ್ನು ವಿಚಾರಿಸಿಕೊಂಡ ಸರ್ವಾಂತರ್ಯಾಮಿ ಪೂಜ್ಯ ಮಂಜಯ್ಯ ಹೆಗ್ಗಡೆಯವರು!

ಸಿದ್ಧವನದಲ್ಲೂ ಲೇಖಕರ ಸೋದರತ್ತೆಗೆ ಹೆಗ್ಗಡೆಯವರನ್ನು ಕಂಡಂತಾಗಿ "ದೇವಸ್ಥಾನಕ್ಕೂ ಸಿದ್ಧವನಕ್ಕೂ ಒಳದಾರಿಯೊಂದಿದೆಯೆ?" ಎಂಬ ಕುತೂಹಲ ಕೆಲವರನ್ನು ಕಾಡಿದಾಗ "ಹೂಂ! ಇದೆ ಅಂತಃಕರಣದ ಒಳದಾರಿ....." ಲೇಖಕರ ಬಾಯಿಂದ ಈ ಮಾತು ಬಂದು ನೂರಾರು ಪುಟಗಳ ವಿವರಣೆಯಿಂದಲೂ ಸಾಧ್ಯವಾಗದ ಅಲೌಕಿಕತೆಯು ನಮ್ಮಲ್ಲಿ ಸ್ಫುರಿಸದಿರದು! ಅತ್ತೆಗೆ ಹೆಗ್ಗಡೆಯವರ ದರ್ಶನವಾದುದು ಇಂದಿಗೂ ಲೇಖಕರಿಗೆ ಒಂದು ಒಗಟಾಗಿದೆ. "ಭಾವಜೀವಿಗೆ ಹೆಗ್ಗಡೆಯವರು ಎಲ್ಲಿ ಕಾಣಲಿಕ್ಕಿಲ್ಲ" ಎಂದು ನುಡಿದು ಸಂದೇಹದ ತಾಯ್ಬೇರನ್ನೆ ಕಿತ್ತಿರುವರು!

ಆಧುನಿಕ ವಿದ್ಯಾಭ್ಯಾಸದಿಂದ ಯಾವ ಪ್ರಯೋಜನವೂ ಆಗದೆಂದು ಸಿದ್ಧವನ ಕಂಡಮೇಲೆ ನಿರಕ್ಷರಕುಕ್ಷಿಗಳಾದ ಹೆಂಗಸರಿಗೂ ಮನದಟ್ಟಾಗಿದೆ.

"ಹುಚ್ಚ ಇದ್ದೀರಿ ನೀವಿಬ್ಬರೂ! ಎಲ್ಲಿಯಾದರೂ ಆಶ್ರಮ ಕಟ್ಟಬೇಕು, ಸಾಲೆ ಸ್ಥಾಪನಮಾಡಬೇಕು ಅಂದರೆ ಆಗತದ? ಇದನ್ನೆಲ್ಲ ಮಾಡಿಸುವ ದೊಡ್ಡ ಜೀವವೊಂದು ಹುಟ್ಟಿಬರಬೇಕಾಗತದ, ಭೂಮಿ ವ್ಯಾಲ" ಎಂದು ತಮ್ಮ ನೋದರತ್ತೆ ಭಾವಪೂರ್ಣ ಅಭಿಪ್ರಾಯವಿತ್ತಾಗ ಲೇಖಕರಲ್ಲಿ ಇದರ ಬಗ್ಗೆ ಪೂರ್ಣ ವಿಶ್ವಾಸ ಮೂಡಲಿಲ್ಲವಂತೆ! ವಿದ್ಯಾವಂತರದು ತರ್ಕಬುದ್ಧಿ. ಸುಸಂಸ್ಕೃತವಂತರದು ಅನುಭಾವ ಬುದ್ಧಿ. ರಾಶಿಗಟ್ಟಲೆ ಹಣವಿದ್ದೆಡೆ ಸಿದ್ಧವನ ಏಳುವುದು ಸುಲಭವೆಂದು ವಿದ್ಯಾವಂತಹೃದಯ ನುಡಿದರೆ ರಾಶಿಹಣ ವಿದ್ದೆಡೆಯಲ್ಲಾ ಸಿದ್ಧವನ ಏಳಲಾರದು; ಅದನ್ನು ಏಳಿಸಲೋಸುಗವೇ ಮಹ ದಾತ್ಮ ಅವತರಿಸಿದಾಗ ಮಾತ್ರ ಅದು ಸಾಧನ ಎಂದು ಸುಸಂಸ್ಕೃತ ಹೃದಯ ನುಡಿದಿದೆ! ಲೇಖಕರ ನೋದರತ್ತೆಗೆ ಸಿದ್ಧವನದಲ್ಲಿ ಹೆಗ್ಗಡೆಯವರ ದರ್ಶನವಾದುದನ್ನು ಲೇಖಕರು "ಭಾವಜೀವಿಗೆ ಹೆಗ್ಗಡೆಯವರು ಎಲ್ಲಿ ಕಾಣ ಲಿಕ್ಕಿಲ್ಲ?" ಎಂದು ಉದ್ಗಾರತೆಗೆದು ನಮ್ಮ ಸಂದೇಹವನ್ನು ನಿವಾರಿಸಿರುವರು. ಇನ್ನು ಮುಂದೆ ಭಾರತದಲ್ಲಿ ಲೇಖಕರು ಎಲ್ಲಿ ಸಂಚರಿಸಿದಲ್ಲಿ ಹೆಗ್ಗಡೆಯವರ ದರ್ಶನವಾದುದನ್ನು ವಿವರವಾಗಿ ಚಿತ್ರಿಸಿರುವರು. ಮೊದಲ ದರ್ಶನ ಭೌತಿಕ ವಾದುದಾದರೆ ಲೇಖಕರ ದರ್ಶನ ಹೆಗ್ಗಡೆಯವರ ಆಧ್ಯಾತ್ಮಿಕದರ್ಶನ. ಲೇಖ ಕರು ಹೋದೆಡೆಯಲ್ಲೆಲ್ಲ ಒಂದಲ್ಲ ಒಂದು ರೀತಿ ಹೆಗ್ಗಡೆಯವರ ಪ್ರಭಾವವೂ ಲೇಖಕರಿಗಿಂತ ಮುಂಚೆ ಅಲ್ಲಿಗೆ ಧಾವಿಸಿದೆ ನಾನಾ ವ್ಯಕ್ತಿಗಳ ಬಾಯಿಂದ ಮಾನ್ಯ ಹೆಗ್ಗಡೆಯವರ ಔದಾರ್ಯ, ವಿಶ್ವಾನುಕಂಪ ಇವುಗಳನ್ನು ಕೇಳಿದ ಲೇಖಕರು ಆಗಾಗ ಭಾವಪರವಶರಾಗಿರುವರು. ಶ್ರವಣಬೆಳಗುಳದಲ್ಲೂ ಹೆಗ್ಗಡೆಯವರ ಗುಣಗಾನ! ಅದರಲ್ಲೂ ಸರ್ವಸಂಗ ಪರಿತ್ಯಾಗಿಗಳಾದ ಯತಿ ವರ್ಯರು ಹೆಗ್ಗಡೆಯವರನ್ನು ಕೊಂಡಾಡಿದಾಗ ಪರವಶರಾಗದಿರಲು ಯಾರಿಂದ ತಾನೇ ಸಾಧ್ಯ!

ಸಮ್ಮೇದ ಶಿಖರದಡಿ ಹೆಗ್ಗಡೆಯವರ ಪ್ರಭಾವ ಅಚ್ಚೊತ್ತಿ ನಿಂತಿರುವು ದನ್ನು ಲೇಖಕರು ಹೃದಯಂಗಮವಾಗಿ ಚಿತ್ರಿಸಿರುವರು. ಧರ್ಮಶಾಲೆಗೆ ಹೆಗ್ಗಡೆಯವರಿತ್ತಿದ್ದ ಪಾತ್ರೆಯನ್ನು ಕಂಡು "ಹೌದೇನಪ್ಪ . . . . . ಆ ನಾಡೆಲ್ಲಿ, ಈ ಕಾಡೆಲ್ಲಿ? ಇಲ್ಲಿಯೂ ಆ ಪುಣ್ಯಾತ್ಮನ ಹೆಸರು ಹೇಳಿ ಜನ ಅನ್ನ ಬೇಯಿಸಿ ಉಣ್ಣಬೇಕು . . . . . ಅವನ ಪುಣ್ಯಕ್ಕೇನು ಸೀಮೆ ಇದೆಯೆ?" ಈ ಮಾತು ಸಾಮಾನ್ಯ ಹೆಣ್ಣುಮಗಳದು. ಈಕೆಯಾಡಿದ್ದರಲ್ಲಿ ಕೊನೆಯ ಮಾತಂತೂ

ಮಹದ್‌ವ್ಯಕ್ತಿಯ ಮಹತ್ಕಾರ್ಯಕ್ಕೆ ಹಾಡಿದ ಮಂಗಳವಾಗಿದೆ. ಯಾವ ಕವಿ ತಾನೆ ಇದಕ್ಕಿಂತಲೂ ಮನಮುಟ್ಟುವಂತೆ ವಿವರಿಸಬಲ್ಲ? ಜೈನ ಶ್ರಾವಕಿಯರದು ಮೂಢ ನಂಬಿಕೆಯೆಂದು ಇಂದಿನ ವಿದ್ಯಾವಂತರು ಹಳಿಯುವುದುಂಟು. ಆದರೆ ಶ್ರಾವಕಿಯರ ಮುಗ್ಧ ಭಕ್ತಿಯೆದಿರು ಕಲಿತವರ ತರ್ಕ ವಿತರ್ಕ ಕೆಲಸಕ್ಕೆ ಬಾರದ್ದು. ಸಹಸ್ರ ಸಂದೇಹಗಳನ್ನು ಪುಡಿಗುಟ್ಟಲು ಮುಗ್ಧಸ್ತ್ರೀಯರ ಒಂದೊಂದು ಮಾತೇ ಸಾಕು! ಮಿರ್ಜಿಯವರ ಗ್ರಂಥದುದ್ದಕ್ಕೆ ಇಂಥ ಹೆಣ್ಣುಮಕ್ಕಳು ಹಲವಾರು ಜನ ಬಂದಿದ್ದಾರೆ.

ರವೀಂದ್ರರ ಶಾಂತಿನಿಕೇತನಕ್ಕೂ ಮಿರ್ಜಿಯವರು ಹೋಗಿ ಅಲ್ಲಿನ ವ್ಯಾಸಂಗಕ್ರಮಕ್ಕೂ ಸಿದ್ಧವನಕ್ಕೂ ತುಲನೆ ಮಾಡಿರುವರು. ಶಾಂತಿನಿಕೇತನ ಸಿರಿವಂತರ ಆಶ್ರಮ! ಸಿದ್ಧವನ ಬಡವರ ಆಶ್ರಮ! ಎಂಥ ವಿವರಣೆ. ಈ ಮಾತು ನಿಜವಾದುದು. ರವೀಂದ್ರರ ಮುಂದೆಯೇ ಯಾರೋ ಒಬ್ಬರು ಸಿದ್ಧವನದ ಮಹಿಮೆಯನ್ನು ವಿವರಿಸಿದರಂತೆ. ಹೆಗ್ಗಡೆಯವರ ಬದುಕೆಲ್ಲ ಎಲೆಮರೆಯ ಕಾಯಂತೆ ಇರುವಂಥದು. ಆದರೆ ಆಗಾಗ ಅದರ ಏಕಾಂತವೇ ಪ್ರಚಾರಕ್ಕೆ ಪುಟಕೊಟ್ಟಿದೆ. "ದಕ್ಷಿಣ ಭಾರತದ ಪ್ರವಾಸದಲ್ಲಿ ಪ್ರತ್ಯಕ್ಷ ಹೆಗ್ಗಡೆಯವರನ್ನು ಸಂದರ್ಶಿಸಿದ್ದೆ. ಉತ್ತರ ಹಿಂದೂಸ್ಥಾನದಲ್ಲಿ ಅವರ ಪ್ರಭಾವವನ್ನು ಕಂಡುಕೊಂಡು ಕನ್ನಡ ನಾಡಿಗೆ ಮರಳಿದೆ." ಎಂದು ಲೇಖಕರು ಮನಮೆಚ್ಚಿ ನುಡಿದಿದ್ದಾರೆ.

"ಅಕ್ಸಫರ್ಡ ಯುನಿವರ್ಸಿಟಿಯಲ್ಲಿ ಶಿಕ್ಷಣ ಪಡೆದ ಮೊದಲ ತರಗತಿಯ ವಿದ್ವಾಂಸರ ವಿಚಾರಗಳ ಮಟ್ಟದಲ್ಲಿಯೆ ಭಾರತದಲ್ಲಿ ಬಾಳಿ ಹಣ್ಣಾದ ಹಳ್ಳಿಯ ಹೆಂಗುಸೊಬ್ಬಳ ದರ್ಶನವೂ ಮೂಡುತ್ತಿದೆಯೆಂಬುದನ್ನು ಕಂಡು ಅಚ್ಚರಿಗೊಂಡೆ." ಗೋಕಾಕರು ಅರವಿಂದರ ಬಗ್ಗೆ ತಳೆದ ಸದಭಿಪ್ರಾಯವನ್ನೇ ಲೇಖಕರ ಸೋದರತ್ತೆ ಹೆಗ್ಗಡೆಯವರ ಬಗ್ಗೆ ತಳೆದಿರುವುದನ್ನೂ, ಆಶ್ರಮ ಸ್ಥಾಪಿಸುವಂತಹದಲ್ಲ, ಮಹಾಪುರುಷ ಜನಿಸಿದಾಗ್ಗೆ ಅವೆಲ್ಲ ತಾನಾಗೆ ಮೂಡುವುವು ಎಂದು ಗೋಕಾಕರು, ಲೇಖಕರ ಅತ್ತೆಯೂ ಖಡಾಖಂಡಿತವಾಗಿ ನುಡಿದಿರುವುದನ್ನೂ ಕಂಡು ಅವರಿಬ್ಬರ ದರ್ಶನವೂ ಒಂದೇ ಮಟ್ಟದ್ದೆಂದು ಅಚ್ಚರಿಗೊಂಡಿದ್ದಾರೆ. ಇಲ್ಲಿ ನಾವು ಗಮನಿಸಬೇಕಾದುದೆಂದರೆ ಸಹಸ್ರಾರು ರೂಪಾಯಿಗಳನ್ನು ವ್ಯಯಮಾಡಿ, ಸಹಸ್ರಾರು ಮೈಲಿ ಸಂಚರಿಸಿ ನಾನಾಕಡೆ ಕಲಿತು, ಗೋಕಾಕರು ಯಾವ ಸತ್ಯವನ್ನು ಕಂಡರೋ ಅದೇ ಸತ್ಯವನ್ನು ಲೇಖಕರ ಸೋದರತ್ತೆ

ಸಂಸಾರದಿ ಆಗುಹೋಗುಗಳ ಹೊಡೆತಕ್ಕೆ ಸಿಕ್ಕಿ ಸುಲಭವಾಗಿ ಕಲಿತಿರುವರು. ಇವರಿಬ್ಬರ ವ್ಯಕ್ತಿತ್ವದ ಅಂತರವೆಂದರೆ ಶಾಂತಿನಿಕೇತನಕ್ಕೂ ಸಿದ್ಧವನಕ್ಕೂ ಇರುವ ಅಂತರವೇ!

ಧರ್ಮಪ್ರಚಾರಕರೊಬ್ಬರು ಹೆಗ್ಗಡೆಯುವರನ್ನು ಸಂದರ್ಶಿಸಿ ಶಿಫಾರಸು ಪತ್ರ ಕೇಳಿದಾಗ ಹೆಗ್ಗಡೆಯುವರು ಮಾಡಿದ ಆಶೀರ್ವಾದ ಮಾರ್ಮಿಕವಾದುದು " . . . . . ಈ ದೊಡ್ಡ ಕೆಲಸವನ್ನು ನಿಮಗಿಂತಲೂ ದೊಡ್ಡ ಪಂಡಿತರಿಗೆ ಬಿಟ್ಟುಕೊಟ್ಟು, ನಿಮ್ಮ ಜಮೀನನ್ನು ಒಳ್ಳೆ ರೀತಿಯಲ್ಲಿ ಕೃಷಿಮಾಡಿ ಸರ್ವಜನರಿಗೆ ಪ್ರಯೋಜನಕಾರಿಯಾಗುವಂತೆ ಪ್ರಯತ್ನಿಸಬೇಕಾಗಿ ಶುಭಾಶೀರ್ವಾದ." ಹೊಟ್ಟೆಪಾಡಿಗೆ ಧರ್ಮಪ್ರಚಾರವೆಸಗುವವರಿಗೆ ಹೆಗ್ಗಡೆಯುವರ ಆಶೀರ್ವಾದ ಇದೇ! "ಕಾಯಕವೆ ಕೈಲಾಸವಣ್ಣ" ಎಂದು ಬಸವಣ್ಣನವರು ಇಂಥ ಸಂದರ್ಭದಲ್ಲೇ ನುಡಿದಿರಬೇಕು.

'ಮಹಾ ನಡಾವಳಿ' ಎಂಬ ಭಾಗವನ್ನಂತೂ ಮಿರ್ಜಿಯವರು ಭಾವಾವೇಶದಿಂದ ರಚಿಸಿ 'ನಡಾವಳಿ' ಎಂಬ ಮಾತನ್ನು ಧ್ವನಿಪೂರ್ವಕ ಬಳಸಿರುವರು. "ಅಲ್ಲಿ ಬರುವ ಮಹಾಜನರೆಲ್ಲ ತಮ್ಮ ತಮ್ಮ ಮಹಾ ನಡಾವಳಿಯನ್ನು ಜನಕ್ಕೆ ಪ್ರದರ್ಶಿಸಬೇಕು. ಅಂಥ ಸುಗುಣ ಪ್ರದರ್ಶನವನ್ನು ಹೆಗ್ಗಡೆಯುವರು ಗೌರವಿಸುವರು. ಇದು ನಾಡಿನ ಮಹಾ ನಡಾವಳಿಯ ದರ್ಶನ ರಂಗ" ಎಂದು ಮನಮುಟ್ಟುವಂತೆ ಭಾವಪೂರ್ಣವಾಗಿ ವಿವರಿಸಿರುವರು.

ಕಾರ್ಕಳದಲ್ಲಿ ಗೋಮಟೇಶನಿಗೆ ಹೆಗ್ಗಡೆಯುವರು ಮಸ್ತಕಾಭಿಷೇಕ ಮಾಡಿಸಿದಾಗ ಬಡಬಗ್ಗರಿಗೆಲ್ಲ ಅಭಿಷೇಕ ಮಾಡುವ ಅವಕಾಶ ಸಿಕ್ಕಿತಂತೆ. ಹೆಗ್ಗಡೆಯುವರು ಮಾಡಿದ ಪೂಜೆಯೆಂದರೆ ಜನತಾಪೂಜೆಯೆ! ಭಗವದ್ಭಕ್ತರನ್ನು ಪೂಜಿಸಿ ಪೂಜಿಸಿ ಹೆಗ್ಗಡೆಯುವರು ಭಗವಂತನಿಗೂ ಬೇಕಾದವರಾದರೂ ಇತ್ತ ಭಕ್ತರಿಗೂ ಬೇಕಾದವರಾದರು! "ಹೆಗ್ಗಡೆಯುವರ ಕಾರ್ಯವನ್ನು ಜನ ತಮ್ಮದೆಂದು ಭಾವಿಸುತ್ತಾರೆ. ಇಂಥ ಜನಾದರಣೀಯರಾಗುವುದಕ್ಕೆ ಮಂಜಯ್ಯನವರ ಮಹಾನಡಾವಳಿಯೇ ಕಾರಣವಾಗಿದೆ" ಎಂದು ಲೇಖಕರು ಮನಃಪೂರ್ವಕ ಕೊಂಡಾಡಿದ್ದಾರೆ. ಜನಾಂಗವನ್ನೆ ತಮ್ಮ ಕುಟುಂಬವೆಂದು ಹೆಗ್ಗಡೆಯುವರು ಭಾವಿಸಿದರು. ಜನತೆಯೆಲ್ಲ ಅವರನ್ನು ತಮ್ಮ ಮಾರ್ಗದರ್ಶಕರೆಂದು ಒಪ್ಪಿಕೊಂಡರು.

"ಮನೆಗೆದ್ದು ಮಾರುಗೆದೆಯಬೇಕೆಂಬ ವಿಚಾರದವರು ಹೆಗ್ಗಡೆಯವರು" ಎಂಬ ಮಾತನ್ನು ಪ್ರತಿಪಾದಿಸಲು ಲೇಖಕರು ನಾನಾ ಸಂದರ್ಭಗಳನ್ನು ಹೃದಯಂಗಮವಾಗಿ ನೆನಪಿಗೆ ತಂದುಕೊಂಡಿದ್ದಾರೆ. ಉತ್ತರ ಕರ್ಣಾಟಕ್ಕೆ ಹೆಗ್ಗಡೆಯವರನ್ನು ಆಹ್ವಾನಿಸಿದಾಗ ಅವರ ಬಾಯಿಂದ ಮುತ್ತಿನಂಥ ಮಾತು ಹೊರಟಿವೆ. ಆ ಮುತ್ತುಗಳನ್ನೇ ಆರಿಸಿ ಜೋಪಾನವಾಗಿ ಕಾಪಾಡಿ ಲೇಖಕರು ತಮ್ಮ ಗ್ರಂಥದಲ್ಲಿ ಹುದುಗಿಸಿದ್ದಾರೆ! "ನಮ್ಮ ಕಷ್ಟಗಳನ್ನು ಪರಿಹರಿಸಿಕೊಳ್ಳ ಲಿಕ್ಕೆ ನಾವೇ ಸಿದ್ಧರಾಗಬೇಕು . . . . . . ನಾನೂರು ಮೈಲಿನ ಮೇಲೆ ಬಂದು ನಾನೇನು ತಮ್ಮಂಥ ವಿದ್ವಾಂಸರಿಗೆ ಹೇಳಬಲ್ಲೆ? ನನ್ನ ವೇಳೆಯೂ ಹಾಳು, ತಮ್ಮ ಶ್ರಮವೂ ವ್ಯರ್ಥ." ಪ್ರಚಾರಕ್ಕಿಂತ ವಿಚಾರಶೀಲರು ಮಾನ್ಯ ಹೆಗ್ಗಡೆ ಯವರು. ನೂರು ಮಾತಾಡುವುದಕ್ಕಿಂತ ಒಂದು ಪುಟ್ಟ ಕಾರ್ಯ ಸಾಧಿಸುವುದೇ ಹೆಗ್ಗಡೆಯವರ ಬಾಳಿನ ಗುರಿ. ಅವರ ವಿಚಾರ ಶೀಲತೆಯನ್ನು ನಾಡು ಅನುಸರಿಸಿದರೆ ಎಷ್ಟೋ ಮೇಲು

"ವಿಚಾರಿಸಿದರೆ ಹುರುಳಿದೆ. ಜೀವಾತ್ಮನ ಇಡೀ ಚರಿತ್ರೆಯನ್ನು ಒಂದು ಫಿಲಂಗೆ ಹೋಲಿಸಿದರೆ, ಭೂತಕಾಲ ಭವಿಷ್ಯತ್ಕಾಲಗಳ ಕಥಾ ಘಟಣೆಗಳನ್ನು ತಿಳಿಯದೆ, ಈ ಮಧ್ಯ ದೃಶ್ಯವನ್ನೇ ಕಾಣುವ ಪ್ರೇಕ್ಷಕರು ನಾವಾಗಿದ್ದೇವೆ. ನಮ್ಮ ಯೋಚನೆಗೆ ಸಿಕ್ಕದ ಸಂಸಾರಿಕ ಹಲವುಘಟಣೆಗಳು ನಮ್ಮನ್ನು ದಿಗಿಲುಪಡಿಸಿ ದರೂ ತತ್ವವಿಚಾರಗಳಿಂದ ಅವುಗಳಿಗೆಲ್ಲ ಉತ್ತರಸಿಗುತ್ತದೆ." ತುಂಬುಬಾಳಿನ ಅನುಭವವೇ ಹೆಗ್ಗಡೆಯವರ ಈ ಮಾತಲ್ಲಿ ಅಡಗಿದೆ. ತಮ್ಮ ಪ್ರಿಯತಮೆಯ ನಾವನ್ನು ನೆನಪಿಗೆ ತಂದಾಗ ಬಂದ ತತ್ವಸಿರಿ ಇದು! ಇದನ್ನು ಅನುಭವ ಎನ್ನುವುದಕ್ಕಿಂತ ಅನುಭಾವ ಎಂದರೆ ಒಪ್ಪೀತು!

"ಯಾರೂ ಯಾರ ಹತ್ತಿರವೂ ಬೇಡಿ ಕಾಡಿ ತರಬೇಕಾದುದಿಲ್ಲ. ಎಲ್ಲವೂ ನಮ್ಮಲ್ಲಿಯೇ ಇರುತ್ತದೆ. ಪ್ರತಿಯೊಬ್ಬನ ಆತ್ಮವೂ ಅನಂತಶಕ್ತಿಯಿಂದ ಕೂಡಿದುದಾಗಿದೆ. ನಮ್ಮ ಗುಣವನ್ನು ನಾವು ಕಂಡುಕೊಂಡು ಅರಳಿಸಿಕೊಳ್ಳ ಬೇಕಿಷ್ಟೆ" ಮಾನವನ ಅಂತರಂಗದ ಅನಂತಶಕ್ತಿಯನ್ನು ಹೆಗ್ಗಡೆಯವರು ಗುರುತಿಸಿರುವರು. ಅಂತೆ ಜನತೆಯನ್ನು ನಿರಾಶರಾಗದಿರಿ ಹಾಗು ಧೈರ್ಯ ದಿಂದ ಕಾರ್ಯೋನ್ಮುಖರಾಗಿ ಎಂದು ಪ್ರವಾದಿಯಂತೆ ಎಚ್ಚರಿಸಿರುವರು.

ಕಲಾವಿದರನ್ನೂ ಅವನ ಅರ್ಹತೆಯನ್ನು ಕುರಿತು ಹುಟ್ಟು ಕಲಾವಿದ ರಾದ ಹೆಗ್ಗಡೆಯವರು ಮೆಚ್ಚಿ ಪ್ರೋತ್ಸಾಹಿಸಿರುವುದನ್ನು ಮನಮುಟ್ಟುವಂತೆ

ವಿವರಿಸಿರುವರು. ಋಷಿಯಾಗದವ ಕವಿಯಾಗಲಾರ ಎಂಬುದೇ ಹೆಗ್ಗಡೆಯವರ ಅಭಿಪ್ರಾಯ.

"ಹಾಗೆಲ್ಲ ಹೇಳಬಾರದು ಭಗವದ್ಗೀತೆಯಾಗಲೀ, ಇನ್ನಾವುದೋ ಆಧ್ಯಾತ್ಮಿಕ ವಚನವಾಗಲಿ, ಅನುಭವದಿಂದ ಮೂಡಿ ಬಂದಿದ್ದರೆ ಅವಕ್ಕೊಂದು ಬೆಲೆಯಿರುತ್ತದೆ." ವಿದ್ವಾಂಸರಿಗೆ ಹೆಗ್ಗಡೆಯವರಿತ್ತ ಸಂದೇಶವಿದು. ಅನುಭವಕ್ಕೆ ಬಾರದ ತತ್ವ ಕತ್ತೆ ಹೊರುವ ಸಕ್ಕರೆ ಮೂಟೆಯಂತೆ ನಿಷ್ಫಲವಾದುದು!

ಹೆಗ್ಗಡೆಯವರು ನಿಷ್ಕಾಮಯೋಗಿ. ಸದಾ ಏನಾದರೊಂದು ಕಾರ್ಯದಲ್ಲಿ ತೊಡಗಿರುತ್ತಿದ್ದರು ಕಾಯಕವೆ ಕೈಲಾಸವಣ್ಣ ಎಂದು ನಂಬಿ ಬಾಳಿದ ಜೀವ ಅವರದು. "ಮನುಷ್ಯ ಯಾವಾಗಲು ನಿಶ್ಚಿಂತೆಯಾಗಿರಬಾರದು ನೋಡಿ. ಮನಸ್ಸನ್ನು ಒಂದಿಲ್ಲ ಒಂದು ಕೆಲಸದಲ್ಲಿ ತೊಡಗಿಸಬೇಕಲ್ಲವೆ ನಾವು? ಅದು ತಾನಾಗಿಯೆ ಅತಿಥಿ ಅಭ್ಯಾಗತರ ಸೇವೆಯಲ್ಲಿ ನಿರತವಾಗಿರುವಂತಿದ್ದರೆ ಅದಕ್ಕಿಂತ ಹೆಚ್ಚಿನದು ಇನ್ನೇನು ಬೇಕು." ಅನಾರೋಗ್ಯದಿಂದ ನಿತ್ರಾಣಗೊಂಡಿದ್ದ ಹೆಗ್ಗಡೆಯವರ ಬಾಯಲ್ಲಿ ಬಂದಿರುವ ಮಾತಿದು. ದೇಹದ ನಿತ್ರಾಣವನ್ನು ಹಿನ್ನೂಕಿ ದುಡಿಯುವ ಆತ್ಮಶಕ್ತಿ ಅವರದು.

ಆತ್ಮೀಯರಾದವರಾರೂ ತಮ್ಮ ಬಳಿ ಇಲ್ಲವಲ್ಲ ಎಂದು ಲೇಖಕರು ಮರುಕದಿಂದ ನುಡಿದಾಗ "ಇಲ್ಲಿರುವ ಜನವೆಲ್ಲ ನನ್ನ ತೀರ ಆತ್ಮೀಯರೆ ಆಗಿದ್ದಾರೆ. ಮಗಳು, ತಮ್ಮ ದೂರವಿದ್ದರೇನಾಯಿತು? ನೀವೆಲ್ಲ ಆತ್ಮೀಯರೆ ಅಲ್ಲವೆ?" ಎಂದಿರುವದನ್ನು ಓದಿದಾಗ ರತ್ನಾಕರನ ಭರತೇಶ ಸಿಂಧೂದೇವಿಯೊಡನೆ ಆಡಿದ ಮಾತು ನನಗಂತು ನೆನಪಾಗುವುದು.

ಬಾ ಸಿಂಧುದೇವಿ ಮುನ್ನೊಬ್ಬ ತಂಗಿ ಕೈ। ಲಾಸದೊಳ್ತವಸುದಾಳಿದಳು॥
ವ್ಯಾಸಂಗದ ನೋವು ನಿನ್ನಕಂಡಗಲಿ ತೆಂ ।
ದಾಸು ಮುಖರ ದೇವ ನುಡಿದ ॥ ೩ । ಸಂ ॥ ೪೬ ॥
ಅವಳ ಪೆಸರು ಬ್ರಾಹ್ಮಿಲದೇವಿಯೆಂದು । ನಿನ್ನವಯುವದಂತವಳಿರುವು ॥
ನವಗಿನ್ನು ಬ್ರಾಹ್ಮಿಲಾದೇವಿ ನೀನೆಂದು ಮಾ ।
ನವವತಿ ನುಡಿದ ನಾಕೆಯೊಳು ॥ ೪೭ ॥

"ಸಂಬಂಧತನಕ್ಕೆ ಮೂಲ ರಕ್ತಸಂಬಂಧವೊಂದೇ ಅಲ್ಲ; ಸ್ನೇಹವೊಂದಿದ್ದರೆ ಎಲ್ಲಿ ಬೇಕಾದರೂ ಸಂಬಂಧಿಗಳನ್ನು ಹುಡುಕಬಹುದು. ಎಲ್ಲರ ಮನವನ್ನೂ ಭರತೇಶ ಒಲಿಸಿದುದು ಹಾಗು ಸೂರೆಗೈದುದು ತ್ರಿಕರಣ ಶುದ್ಧಿ

ಯಾದ ಪಾವನ ಚರಿತದಿಂದ"* ಭರತೇಶನಂತೆ ಮಾನ್ಯ ಹೆಗ್ಗಡೆಯವರೂ ಹೋದವರನ್ನೂ ಬಂದವರನ್ನೂ ಆತ್ಮೀಯರಂತೆ ಭಾವಿಸಿದರು! ಜನ ಅವ ರೊಡನೆ ಆತ್ಮೀಯರಂತೆ ನಡೆದುಕೊಂಡರು!

ಕರ್ಮಯೋಗಿ ಹೆಗ್ಗಡೆಯವರೊಡನೆ ಒಂದುದಿನ ಸುತ್ತಾಡಲು ಲೇಖಕರಿಗೆ ಆಯಾಸವಾಯಿತಂತೆ "ನನ್ನ ಮನಸ್ಸೇನೋ ಇತ್ತು. ಈ ತರುಣ ದೇಹ ಸೋತು ಹೋಗಿತ್ತು ಆ ಕರ್ಮಯೋಗಿಯ ಒಂದು ದಿನದ ಸಾನಿಧ್ಯ ದಲ್ಲಿ" ಎಂದು ಲೇಖಕರು ನಿಸ್ಪೃಹತೆಯಿಂದ ನುಡಿದಿರುವರು.

ಲೇಖಕರು ಹೆಗ್ಗಡೆಯವರಿಗೆ ಆತ್ಮೀಯರಂತೆ ಇದ್ದುದರಿಂದ ಅವರ ಅವಸಾನದ ವೇಳೆ ಸನ್ನಿಹಿತವಾದಾಗ ಲೇಖಕರ ಮನಸ್ಸಿಗೆ ಪರೋಕ್ಷವಾದ ಜ್ಞಾನ ಸುಳಿದು ಒಂದು ಮಹಾವಸ್ತುವನ್ನು ಕಳೆದುಕೊಳ್ಳುವಾಗ ಆಗುವ ಸಂಕಟವಾಗಿದೆ. ಆಗಿನ ತಳಮಳವನ್ನು ಓದುಗರ ಕರುಳು ಸುಲುಚುವಂತೆ ವಿವರಿಸಿರುವರು.

ಹೆಗ್ಗಡೆಯವರು ಪರಂಧಾಮರಾದ ಮೇಲೆ ನಾಡಿಗೆ ನಾಡೆ ಶ್ರದ್ಧಾಂಜಲಿ ಅರ್ಪಿಸಿದ್ದನ್ನು ಭಾವಾವೇಶದಿಂದ ಶ್ರೀ ಮಿರ್ಜಿಯವರು ಚಿತ್ರಿಸಿ ಓದುಗರಲ್ಲೂ ಒಂದು ರೀತಿಯ ಪರವಶತೆ ಬರುವಂತೆ ಸಮ್ಮೋಹನಾಸ್ತ್ರ ಬೀರಿರುವರು. ಈ ಭಾಗವನ್ನೋದುತ್ತಾ ನನಗಾದ ಮನೋವಿಪ್ಲವವನ್ನು ಸುಖವೋ, ಸಂತೋಷವೋ, ಸಂಕಟವೋ ಏನೊಂದು ಹೇಳಲಾರದವನಾಗಿದ್ದೇನೆ. ಜೀವ ನ್ಮುಕ್ತ ಜೀವ ನಮ್ಮನ್ನಗಲುವಾಗ ನಮ್ಮ ಮನಕ್ಕಾಗುವ ವೇದನೆ ಒಮ್ಮೆ ಸಂಕಟ ವಾದರೆ ಇನ್ನೊಮ್ಮೆ ನೆಮ್ಮದಿಯೂ ಆಗುವಂತೆ ಇದೆ. ಮಾನ್ಯ ಹೆಗ್ಗಡೆಯವರ ಸಮಾಧಿ ಮರಣ! ಪೂಜ್ಯ ಗಾಂಧೀಜಿ ನಿರ್ಯಾಣ ಹೊಂದಿದಾಗ ಬ್ರಹ್ಮಾಂಡ ದಾದ್ಯಂತ ಸಂತಾಪದ ತರಂಗವೆದ್ದಿತು! ಅಂತೆ ಹೆಗ್ಗಡೆಯವರು ನಿರ್ಯಾಣ ವಾದಾಗಲೂ ಅಂಥದೇ ತರಂಗ ನಾಡಿನ ಉದ್ದಗಲದಲ್ಲೂ ಎದ್ದಿರುವದನ್ನು ಪ್ರತಿಭಾವಂತರಾದ ಮಿರ್ಜಿಯವರು ಮನಮುಟ್ಟುವಂತೆ ವಿವರಿಸಿದಾರೆ. ದಸರದಲ್ಲಿ ಮೈಸೂರಿನ ಅರಮನೆ ಅಡಿಯಿಂದ ಮುಡಿತನಕ ವಿದ್ಯುಜ್ಜ್ಯೋತಿ ಗಳಿಂದ ರಾರಾಜಿಸುವುದನ್ನು ಕಂಡಾಗ ದಿಗ್ಭ್ರಮೆ ಹಿಡಿವಂತೆ ಹೆಗ್ಗಡೆಯವರ ಮೋಕ್ಷಕಲ್ಯಾಣ ಶ್ರದ್ಧಾಂಜಲಿಯ ಜ್ಯೋತಿಗಳಿಂದ ರಾರಾಜಿಸಿ ನಮ್ಮನ್ನು ದಿಗ್ಭ್ರಮೆಗೊಳಿಸಿದೆ!

---

* ಜಿ. ಬ್ರಹ್ಮಪ್ಪ, ಅಭಿವಂದನೆ, ಪುಟ ೩೬೮.

ಹೆಗ್ಗಡೆಯವರ ಸಮಾಧಿಯನ್ನು ಸಂದರ್ಶಿಸಿದ ಲೇಖಕರು ಅಲ್ಲಿನ ಹೂಗಿಡದ ಹೂಗೊಂಚಲನ್ನು ಕಂಡು "ಏಕಾಂತದಲ್ಲಿಯೇ ಅರಳಿ ಈಗಲೂ ತನ್ನ ಜೀವನಸೌರಭವನ್ನು ಬೀರುತ್ತಲಿದೆ. ಹೆಗ್ಗಡೆಯವರ ಸಮಾಧಿ ಸ್ಥಾನವಲ್ಲವೆ ಅದು?" ಎಂದು ಪುಳಕಗೊಂಡು ನುಡಿದಿರುವರು. ಮಾನ್ಯ ಹೆಗ್ಗಡೆಯವರ ಭವ್ಯಜೀವನ ಕಮನೀಯ ಪುಷ್ಪವಾಗಿ ಅವರ ಸಮಾಧಿ ಯಿಂದ ಮೇಲೆದ್ದು ಶ್ರೀ ಮಿರ್ಜಿಯವರಿಗೆ ಪ್ರತ್ಯಕ್ಷವಾಗಿ ದಿವ್ಯದರ್ಶನ ವನ್ನಿತ್ತಿದೆ! ತಮ್ಮ ಬಾಳಿನುದ್ದಕ್ಕೂ ಮಾನ್ಯ ಹೆಗ್ಗಡೆಯವರ ಮಹಿಮೆಯನ್ನು ಕವಿಸಹಜ ಮನೋಭಾವದಿಂದ ಗುರುತಿಸಿ ಆನಂದದಿಂದ ತಮ್ಮ ಮನೋ ಮುಕುರದ ಬಿಂಬಕ್ಕೆ ಈ ಗ್ರಂಥರೂಪದಲ್ಲಿ ಆಕಾರವಿತ್ತು ಲೇಖಕರು ಪುನೀತ ರಾಗಿದ್ದಾರೆ! ಹೆಗ್ಗಡೆಯವರು ಬದುಕಿದ್ದಾಗ ಅವರ ಸಾನಿಧ್ಯದಲ್ಲಿ ಲೇಖಕರು ಎಷ್ಟು ಸಂತೃಪ್ತರಾಗಿದ್ದರೋ ಅವರ ಸಮಾಧಿಯಲ್ಲೂ ಅಷ್ಟೇ ಸಂತೃಪ್ತ ರಾಗಿದ್ದಾರೆ ಮಾನ್ಯ ಹೆಗ್ಗಡೆಯವರು ಸತ್ತರೆಂದು ಸಾಮಾನ್ಯರಿಗೆ ತೋರಿದರೆ ಮಿರ್ಜಿಯವರ ಪಾಲಿಗಂತೂ ಮೊದಲಿಗಿಂತಲೂ ಚೆನ್ನಾಗಿ ಹೆಗ್ಗಡೆಯವರು ಬದುಕಿ ನೀರವ ದಿವ್ಯಧ್ವನಿಯನ್ನು ಬೀರುತ್ತಿರುವರೆಂದೇ ನಂಬುಗೆ!

ಮಾನ್ಯ ಹೆಗ್ಗಡೆಯವರ ಬಾಳು ಬಹುಮುಖವಾದುದು! ಇವರು ಸದಾ ಚಾರಸಂಪನ್ನರು; ಸಮಾಜ ಸುಧಾರಕರು; ರಾಜಕೀಯ ಧುರಂಧರರು; ಧರ್ಮಪರಾಯಣರು; ಅತ್ಯುತ್ತಮ ಚಿತ್ರಗಾರರು; ರಸಋಷಿಗಳು; ಅನು ಪಮ ಸಹೃದಯರು. ಇವರ ಬಾಳ್ವೆ ಪರಿಪೂರ್ಣವಾದುದು. ಲೋಕ ವ್ಯವಹಾರದಲ್ಲಿ ಅಂಟಿಯೂ ಅಂಟದಂತೆ ಇದ್ದು ಪರಂಧಾಮವೈದಿದ ಪಾವನಾತ್ಮರು!

ತನುವಂ ಸಂಘದ ಸೇವೆಯೊಳ್ಮನಮನಾತ್ಮಧ್ಯಾನದಭ್ಯಾಸದೊಳ್ ।
ಧನಮಂದಾನ ಸುಪೂಜೆಯೊಳ್ದಿನ ಮನರ್ಹದ್ಧಮ ಕಾರ್ಯಪ್ರಪ ॥
ರ್ತನೆಯೊಳ್ಪರ್ವವನೊಲ್ದು ನೋಂಪಿಗಳೊಳಿರ್ದಾಯುಷ್ಯಮಂ ಮೋಕ್ಷ ಚಿಂ।
ತನೆಯೊಳ್ತೀರ್ಚುವ ಸದ್ಗೃಹಸ್ಥನಸಫಂ ರತ್ನಾಕರಾಧೀಶ್ವರ ॥ ರ. ಶ. ೪೩.

ದೇಹವನ್ನು ಸಾಧುಸಂತರ ಸೇವೆಯಲ್ಲಿ ಸವೆಸಬೇಕು; ಮನಸ್ಸನ್ನು ಪರಮಾತ್ಮನ ಧ್ಯಾನದಲ್ಲಿ ಮುಳುಗಿಸಬೇಕು; ಐಶ್ವರ್ಯವನ್ನು ದಾನಪೂಜಾದಿ ಗಳಲ್ಲಿ ವಿನಿಯೋಗಿಸಬೇಕು; ದಿನವನ್ನು ಅರಹಂತನ ಪೂಜೆಯಲ್ಲಿ ಕಳೆಯ

ಬೇಕು. ಹಬ್ಬಗಳನ್ನು ವ್ರತಾದಿಗಳಿಂದ ಆಚರಿಸಬೇಕು. ಇಡೀ ಆಯು ಸ್ಸನ್ನು ಮೋಕ್ಷಚಿಂತೆಗಾಗಿ ಮುಡಿಪಾಗಿಡಬೇಕು." ಮಾನ್ಯ ಹೆಗ್ಗಡೆಯವರು ರತ್ನಾಕರನ ಈ ಸೂತ್ರದಂತೆ ನಡೆದಿರುವರು. ಇಂಥ ಮಹನೀಯರನ್ನು ಕಂಡು ರತ್ನಾಕರ ಈ ಸೂತ್ರವನ್ನು ನಿರ್ಮಿಸಿದನೋ ಏನೋ!

ಧರ್ಮಸ್ಥಳದಲ್ಲಿ ಹೆಗ್ಗಡೆಯವರು ಭಾಗಿಯಾಗದ ಉತ್ಸವವಿರಲಿಲ್ಲ; ಪೂಜೆಯಿರಲಿಲ್ಲ; ಪುನಸ್ಕಾರವಿರಲಿಲ್ಲ. ಒಮ್ಮೆ ತಾವೇ ದೇವರ ಪೂಜೆಯಲ್ಲಿ ಮುಳುಗುವರು; ಒಮ್ಮೆ ಮಂಜುನಾಥನ ಪೂಜೋತ್ಸವದಲ್ಲಿ ಪ್ರತ್ಯಕ್ಷಭಾಗಿ ಯಾಗುವರು. ಮರಳಿ ಅತಿಥಿಗಳ ಊಟೋಪಚಾರಗಳ ಬಗ್ಗೆ ನೋಡಿ ಕೊಳ್ಳುವರು. ಸಾಹಿತಿಗಳ ಸತ್ಕಾರವೆಂದರೆ ಹೆಗ್ಗಡೆಯವರ ಸಂತೋಷ ಅಷ್ಟಿಷ್ಟಲ್ಲ! ಹೆಗ್ಗಡೆಯವರ ಕೈಯಿಂದ ಆಶೀರ್ವಾದಪೂರ್ವಕ ಧನ ಸ್ವೀಕರಿಸದ ಸಾಹಿತಿಯೇ ಇಲ್ಲವೆಂದರೂ ಒಪ್ಪೀತು. ಅವರಿದ್ದೆಡೆ ಚಿತ್ರಗಾರರು ಸುತ್ತು ಗಟ್ಟಿದ್ದರು! ಸಂಗೀತಗಾರರು ಹಾಡುತ್ತಿದ್ದರು! ನರ್ತಕರು ಅಭಿನಯಿಸು ತ್ತಿದ್ದರು! ಕವಿಗಳು ಬಣ್ಣಿಸುತ್ತಿದ್ದರು! ಧರ್ಮಸ್ಥಳವೆಂದರೆ ಕಲಿಕಾಲದ ನಮವಸರಣ! ಮಂಜುನಾಥ ಚಂದ್ರನಾಥರು ಸಾಕಾರಗೊಂಡು ಮಾನ್ಯ ಹೆಗ್ಗಡೆಯವರಾದರೇನೋ!

ಮಿರ್ಜಿಯವರು ರಸಋಷಿಯಾದ ಮಂಜಯ್ಯ ಹೆಗ್ಗಡೆಯವರ ಬಾಳಿನ ನಾನಾ ಮುಖವನ್ನು ಸಹಜ ಸುಂದರ ಶೈಲಿಯಲ್ಲಿ ವಿವರಿಸಿರುವರು! ಅಲ್ಲಲ್ಲಿ ಹಲವಾರು ಪಾತ್ರಗಳ ಮನೋಭಾವವನ್ನು ಹೃದಯಂಗಮವಾಗಿ ಕಡೆದಿರು ವರು! ನಾನಾ ಪಾತ್ರಗಳಿದ್ದರೂ ಅವರೆಲ್ಲ ಮಾನ್ಯ ಹೆಗ್ಗಡೆಯವರ ಅದ್ಭುತ ಪಾತ್ರದ ಪೋಷಣೆಗಾಗಿ ಮಾತ್ರ! ಸಂದರ್ಭಗಳನ್ನು ಕಣ್ಣಿಗೆ ಕಟ್ಟುವಂತೆ ಲೇಖಕರು ಕಾವ್ಯಮಯವಾಗಿ ವರ್ಣಿಸಿ ಕೃತಕೃತ್ಯರಾಗಿದ್ದಾರೆ. ಮಾನ್ಯ ಮಂಜಯ್ಯ ಹೆಗ್ಗಡೆಯವರ ಅನುಪಮ ಬಾಳ್ವೆಯನ್ನು ಸಿಂಗರಿಸಲು ಬೇಕಾದ ಕಲಾಸಿರಿಯನ್ನು ಕನ್ಯಾಕುಮಾರಿಯಿಂದ ಹಿಡಿದು ಗೌರೀಶಂಕರದ ತನಕ ಸುತ್ತಾಡಿ ಶ್ರೀ ಮಿರ್ಜಿಯವರು ಸಂಗ್ರಹಿಸಿರುವರು! ಮಿರ್ಜಿಯವರ ಜೊತೆ ಯಾಗಿ ವಾಚಕವೃಂದವೂ ಈ ಪವಿತ್ರಕಾರ್ಯಕ್ಕೆ ಸುತ್ತಾಡಬೇಕಾಗುವುದು; ಶ್ರವಣಬೆಳಗೊಳ ಸಮ್ಮೇದ ಶಿಖರ ನೋಡಬೇಕಾಗುವುದು, ಎಲ್ಲಿ ಸುತ್ತಾಡಿ ದರೂ ಹೆಗ್ಗಡೆಯವರ ಕೀರ್ತಿಕಿರಣ ಬಂದು ವಾಚಕರನ್ನು ತಟ್ಟುವಂತೆ ಶ್ರೀ. ಮಿರ್ಜಿಯವರು ಅದ್ಭುತಕಲೆಯನ್ನು ಕನ್ನಡಿಗರಿಗಿತ್ತು ಧನ್ಯರಾಗಿರುವರು!

# 'ದಶಭಕ್ತಿ' ಮತ್ತು 'ಸಮಯಸಾರ'

ಸೌ. ಚಂದ್ರಾವತಿ ಫೂಳಣ್ಣವರ, ಸೇಡಬಾಳ

ಶ್ರೀ ಮಿರ್ಜಿ ಅಣ್ಣಾರಾಯರು ಸಂಪಾದಿಸಿದ 'ದಶಭಕ್ತಿ' ಮತ್ತು 'ಸಮಯಸಾರ'ಗಳನ್ನು ಕೂಡಿಯೇ ಕನ್ನಡಿಗರಿಗೆ ಪರಿಚಯ ಮಾಡಿಕೊಡುವುದರಲ್ಲಿ ಒಂದು ಉದ್ದೇಶವಿದೆ. ಪ್ರಾಕೃತ ಭಾಷೆಯಲ್ಲಿ 'ದಶಭಕ್ತಿ'ಯನ್ನು ಬರೆದವರು ಭಗವಾನ್ ಕುಂದಕುಂದಾಚಾರ್ಯರು. ಅದರಂತೆ 'ಸಮಯಸಾರ'ದ ಕರ್ತೃಗಳೂ ಕೂಡ ಅದೇ ಆಚಾರ್ಯರಾಗಿದ್ದಾರೆ. ಕನ್ನಡ ಆಮ್ನಾಯದಲ್ಲಿ ಶ್ರೇಷ್ಠರೂ ಅಧ್ಯಾತ್ಮರಸಿಕರೂ ಆದ ಈ ಪ್ರಾಚೀನ ಆಚಾರ್ಯರ ಎರಡೂ ಮಹತ್ವದ ಗ್ರಂಥಗಳನ್ನು ನಮ್ಮಲ್ಲಿ ಇಂದಿನ ಸಾಹಿತ್ಯಾಚಾರ್ಯರೆನಿಸುವ ಅಣ್ಣಾರಾಯರೇ ಸಂಪಾದಿಸಿದ್ದುದರಿಂದ ಇವೆರಡನ್ನು ಸೇರಿಸಿ, ಈ ಒಂದೇ ನಿಬಂಧದಲ್ಲಿ ವಿವೇಚಿಸಲಾಗಿದೆ.

ಈಗಲೂ ಜೈನ ಮುನಿಗಳೂ ಆಚಾರ್ಯರೂ ತಾವು 'ಕುಂದಕುಂದಾನ್ವಯ'ದವರೆಂದು ಹೇಳಿಕೊಳ್ಳಲಿಕ್ಕೆ ಅಭಿಮಾನ ಪಡುತ್ತಾರೆ. ಹೀಗೆ ಯುಗಪುರುಷರಾಗಿ ಕುಂದಕುಂದಾಚಾರ್ಯರು ಕ್ರಿ. ಶ. ಮೊದಲನೆಯ ಶತಮಾನದಲ್ಲಿ ಬಾಳಿದ್ದರು. ಇವರು ಯೋಗಿಗಳು, ತಪಸ್ವಿಗಳು ಹಾಗೂ ಭಕ್ತರು. ಅವರು ಸಿದ್ಧ, ಶ್ರುತ, ಚಾರಿತ್ರ, ಯೋಗ, ಆಚಾರ್ಯ, ನಿರ್ವಾಣ, ನಂದೀಶ್ವರ, ಚೈತ್ಯ, ಪಂಚಗುರು ಮತ್ತು ತೀರ್ಥಂಕರ ಎಂಬ ಹತ್ತು ವಿಧದಲ್ಲಿ ಭಕ್ತಿಪರ ಪದ್ಯಗಳನ್ನು ಪ್ರಾಕೃತ ಭಾಷೆಯಲ್ಲಿ ರಚಿಸಿದರು. ಮಾನವನ ಸಂಪೂರ್ಣವಾದ ಅಧ್ಯಾತ್ಮಿಕ ವಿಕಾಸಕ್ಕೆ ಈ ಹತ್ತೂ ವಿಧದ ಭಕ್ತಿ ಅವಶ್ಯಕವೆಂದು ಅವರು ತಿಳಿದಿದ್ದರು. ಅದರಂತೆ ಅವರು ತಮ್ಮ ಜೀವನದಲ್ಲಿ ಅವುಗಳನ್ನು ಅನುಷ್ಠಾನದಲ್ಲಿಯೂ ತಂದಿದ್ದರು. ಅವರನ್ನೇ ಅನುಸರಿಸಿದ ಅವರ ಶಿಷ್ಯ ಪರಂಪರೆಯೂ ಅವುಗಳನ್ನು ಮಂತ್ರಗಳಂತೆ ಪಠಿಸಿ, ತಮ್ಮ ಆಚಾರ ವಿಚಾರಗಳಿಗೆ ಅಳವಡಿಸಿಕೊಳ್ಳುತ್ತ ಬಂದರು. ಅದರಿಂದ ಇಂದಿನ ವರೆಗೂ ಜೈನ ಪರಂಪರೆಯಲ್ಲಿ ಮುನಿಗಳೂ ಶ್ರಾವಕರೂ ಕುಂದಕುಂದಾಚಾರ್ಯರ ದಶಭಕ್ತಿಗಳನ್ನು ನಿತ್ಯ ಪಾರಾಯಣದ ಮಂತ್ರಗಳೆಂದು ಪಠಿಸುತ್ತಾರೆ. ಹೀಗೆ ಪರಂಪರಾಗತವಾಗಿ ಮಹತ್ವವನ್ನು ಪಡೆದ ಈ ಪ್ರಾಕೃತ ದಶಭಕ್ತಿಯನ್ನು ಆಗಲೇ — ಕ್ರಿ. ಶ. ೪ನೆಯ ಶತಮಾನದ ಸುಮಾರಿಗೆ — ಪೂಜ್ಯಪಾದಾ

ಚಾರ್ಯರು ಸಂಸ್ಕೃತ ಭಾಷೆಗೆ ಪರಿವರ್ತಿಸಿದರು. ಇದರಿಂದ ಪ್ರಾಕೃತ ದಶ ಭಕ್ತಿಯ ಮಹಿಮೆ ಮತ್ತೂ ಹೆಚ್ಚಿತು. ಇಬ್ಬರೂ ಶ್ರೇಷ್ಠ ಆಚಾರ್ಯರು. ಅದರಿಂದ ಇಬ್ಬರ ದಶಭಕ್ತಿಗಳನ್ನೂ ಕೂಡಿಯೇ ಜನರು ಪಠಿಸಹತ್ತಿದರು. ಈ ಎರಡೂ ದಶಭಕ್ತಿಗಳನ್ನು ಕನ್ನಡದಲ್ಲಿ ಅರ್ಥಸಹಿತವಾಗಿ ಸಂಪಾದಿಸಿ, ಸ್ವರ್ಗೀಯ ಪಂಡಿತರತ್ನಂ ಶಾಂತಿರಾಜ ಶಾಸ್ತ್ರಿಗಳವರು ಒದಗಿಸಿದ್ದರು. ಅದೇ ಗ್ರಂಥವನ್ನು ಇಂದಿನ ಸಾಹಿತಿಗಳಾದ ಅಣ್ಣಾರಾಯರೂ ಸಂಪಾಸಿದಿಕೊಟ್ಟಿದ್ದಾರೆ.

ಪಂ. ಶಾಂತಿರಾಜರ ಗ್ರಂಥವು ಕೇವಲ 'ದಶಭಕ್ತಿ'ಯನ್ನು ಮಾತ್ರ ಒಳಗೊಂಡಿತ್ತು. ಆದರೆ ಮಿರ್ಜಿಯವರ ಗ್ರಂಥದಲ್ಲಿ ಶ್ರಾವಕರಿಗೆ ಉಪಯುಕ್ತವಾದ ಪಂಚಸ್ತೋತ್ರ, ಸಮಂತಭದ್ರರ ಸ್ವಯಂಭೂಸ್ತೋತ್ರ, ಕಲ್ಯಾಣಾಲೋಚನಾ, ಮುನಿಪ್ರತಿಕ್ರಮಣ, ಸಾಮಾಯಿಕಪಾಠ ಇತ್ಯಾದಿ ವಿಷಯಗಳೂ ಸಮಾವೇಶವಾಗಿವೆ. ಅಲ್ಲದೆ ಜೈನದರ್ಶನದ ಸರ್ವಮುಖಗಳನ್ನು ಪ್ರತಿಫಲಿಸುವ ಶ್ರೀ ಉಮಾಸ್ವಾತಿಯವರ 'ತತ್ತ್ವಾರ್ಥಸೂತ್ರ'ವೂ ಇದರಲ್ಲಿದೆ. ಇವೆಲ್ಲವುಗಳಿಗೂ ಸರಸವಾದ ಕನ್ನಡ ನುಡಿಯಲ್ಲಿ ಸಂಪಾದಕರು ಅರ್ಥವನ್ನೂ ವಿವರಿಸಿದ್ದಾರೆ. ಮೇಲಾಗಿ ಭೂಮಿಕೆಯಲ್ಲಿ ಆಚಾರ್ಯರ ಚರಿತ್ರೆಗಳನ್ನೂ ಸಂಗ್ರಹರೂಪದಲ್ಲಿ ಕೊಟ್ಟಿದ್ದಾರೆ. ಅದರಿಂದ ಈ ಗ್ರಂಥವು ಜೈನಶ್ರಾವಕರಿಗೂ ಮುನಿಗಳಿಗೂ ಅತ್ಯುಪಯುಕ್ತವಾಗಿದೆ. ಇದೂ ಅಲ್ಲದೆ, ಜೈನ ತತ್ತ್ವಜ್ಞಾನ ಮತ್ತು ಭಕ್ತಿಯ ವಿಧಾನಗಳನ್ನು ತಿಳಿಯಬಿಚ್ಛಿಸುವ ಅಧ್ಯಾತ್ಮ ರಸಿಕರೆಲ್ಲರೂ ಈ ಗ್ರಂಥವನ್ನು ಒಮ್ಮೆಯಾದರೂ ಅವಲೋಕಿಸಬೇಕು; ತಮ್ಮ ಸಾಧನೆಗೆ ಬಲವನ್ನು ಸಂಪಾದಿಸಬೇಕು.

ಇನ್ನು ಮಿರ್ಜಿಯವರು ಕನ್ನಡ ಅರ್ಥ, ಆಚಾರ್ಯರ ಚರಿತ್ರ, ವಿಸ್ತಾರವಾದ ವಿವೇಚನೆಗಳಿಂದ ಕೂಡಿದ ಭೂಮಿಕೆ, ಪಾರಿಭಾಷಿಕ ಪದಕೋಶಗಳೊಡನೆ ಅತ್ಯಾಧುನಿಕ ಪದ್ಧತಿಯಿಂದ 'ಸಮಯಸಾರ'ವನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಕನ್ನಡದಲ್ಲಿ ಕುಂದಕುಂದಾಚಾರ್ಯರ ಅಧ್ಯಾತ್ಮಿಕ ಗ್ರಂಥವು ಹೀಗೆ ಪ್ರಕಟವಾಗುತ್ತಿರುವುದು ಇದೇ ಮೊದಲನೆಯ ಸಲವಾಗಿದೆ. ಇವರಲ್ಲಿ ಆಚಾರ್ಯರು ಒಂಭತ್ತು ಅಧಿಕಾರಗಳಲ್ಲಿ ಜೀವಾಜೀವ, ಕರ್ತೃ-ಕರ್ಮ, ಪುಣ್ಯ-ಪಾಪ, ಆಸ್ರವ, ಸಂವರ, ನಿರ್ಜರಾ, ಬಂಧ, ಮೋಕ್ಷ ಮತ್ತು ಸರ್ವವಿಶುದ್ಧ ಜ್ಞಾನಗಳನ್ನು ವಿವರಿಸಿದ್ದಾರೆ. ಇವುಗಳಿಗೆಲ್ಲ ಸುಲಭ ಭಾಷೆಯಲ್ಲಿ

ಮಿರ್ಜಿಯವರು ಭಾವವನ್ನು ವ್ಯಕ್ತಪಡಿಸಿದ್ದಾರೆ. ಅಲ್ಲದೆ ಭಗವದ್ಗೀತೆ, ಶಿವಶರಣರ ವಚನ, ಉಪನಿಷತ್ತುಗಳ ಭಾವಪ್ರವಾಹಗಳೊಡನೆ ತುಲನಾತ್ಮಕ ವಾಗಿ ವಿವೇಚಿಸಿದ್ದಾರೆ. ಅದರಿಂದ ವಿಮರ್ಶಕರು ಹೇಳುವಂತೆ ಈ ಗ್ರಂಥ ದಲ್ಲಿ "ಕರ್ಮಬಂಧನದಲ್ಲಿ ಸಿಲುಕಿದ ಜೀವಿಯು ಆ ಬಂಧನದಿಂದ ಬಿಡುಗಡೆ ಯಾಗಿ ಆತ್ಮಾನಂದವನ್ನು ಪಡೆಯುವಂತಹ, ಆತ್ಮದ ಅರಿವನ್ನು ಪಡೆಯು ವಂತಹ ಜ್ಞಾನವನ್ನು ಪಡೆಯಲು ಮಾಡಬೇಕಾದ ಸಾಧನಗಳನ್ನು ತಿಳಿಸ ಲಾಗಿದೆ. ಜಿನಧರ್ಮದ ಸರ್ವಸಂಗ್ರಹದಂತಿರುವ ಈ ಪುಸ್ತಕದಿಂದ ಜೈನ ಧರ್ಮದ ತತ್ವವೇನೆಂದು ಸ್ಪಷ್ಟವಾಗಿ ತಿಳಿಯುವುದರಿಂದ ಜೈನೇತರರಿಗೂ ಇದು ಓದಲು ಉತ್ತಮವಾಗಿದೆ."* ಇಂಥ ಅಮೌಲ್ಯ ಪ್ರಾಕೃತ ಗ್ರಂಥ ವನ್ನು ಕನ್ನಡಿಸಿ ಅಣ್ಣಾರಾಯರು ಕೃತಾರ್ಥರಾಗಿದ್ದಾರೆ.

ಈ ದಶಭಕ್ತಿ, ಸಮಯಸಾರಗಳಿಗೆ ಕನ್ನಡ ಅಧ್ಯಾತ್ಮಿಕ ಸಾಹಿತ್ಯದಲ್ಲಿ ಯಾವಾಗಲೂ ಮನ್ನಣೆಯ ಸ್ಥಾನವಿದೆ.

---

* "ವಿವೇಕಾಭ್ಯುದಯ" ಮಂಗಳೂರು. ಎಪ್ರಿಲ್, ೧೯೫೭.

# ಮಿರ್ಜಿಯವರ ಸಾಹಿತ್ಯ ಸಂಶೋಧನೆ

ಶ್ರೀ. ಎಮ್. ಬಿ. ಪಾಟೀಲ, ಸೇಡಬಾಳ.

ಕನ್ನಡ ಕುಲಪುರೋಹಿತರಾದ ಶ್ರೀ ಆಲೂರ ವೆಂಕಟರಾಯರು, 'ಚಿನ್ಮಯ ಚಿಂತಾಮಣಿ'ಯನ್ನು ಸಂಶೋಧಿಸಿ, ಪ್ರಕಟಿಸಲಿಕ್ಕೆಂದು ಮಿರ್ಜಿ ಅಣ್ಣಾರಾಯರು ಸೇಡಬಾಳದಲ್ಲಿ ಸ್ಥಾಪಿಸಿದ 'ಶಾಂತಿ ಸೇವಾ ಸದನ'ವನ್ನು ಕುರಿತು ಹೀಗೆ ಹೇಳಿದ್ದಾರೆ·—"ಕನ್ನಡ ನಾಡಿನ ಮೂಲೆ ಮೂಲೆಗಳಲ್ಲಿ ಹುಳ ತಿನ್ನುತ್ತಲಿದ್ದ ಹಳಗನ್ನಡ ಗ್ರಂಥಗಳನ್ನು ಪ್ರಕಟಿಸುವ ಸಾಹಸದ ಕೆಲಸಕ್ಕೆ ಕೈಯಿಕ್ಕಿದ 'ಶಾಂತಿ ಸೇವಾ ಸದನ'ದ ಕಾರ್ಯ ಅಭಿನಂದನೀಯ" ಆಗಲೇ, ಅನೇಕ ಕಾವ್ಯಗಳನ್ನು ಸಂಶೋಧಿಸಿ, ಪ್ರಕಟಿಸಿದ ಶ್ರೀ ಶಿ. ಶಿ. ಬಸವನಾಳ ರಂತೂ "ಹಳಗನ್ನಡ ಕಾವ್ಯಮಾಲೆಯ ಉದ್ದೇಶವು ಸ್ತುತ್ಯವಾಗಿದೆ.*"— ಎಂದು ಮಿರ್ಜಿಯವರ ಬೆನ್ನುತಟ್ಟಿದರು. ಈ ಇಬ್ಬರು ಹಿರಿಯರ ಉಕ್ತಿಗಳಿಂದ ಕನ್ನಡದಲ್ಲಿ ಸಾಹಿತ್ಯಸಂಶೋಧನೆ ಹಾಗೂ ಪ್ರಕಾಶನಗಳಿಗೆ ಇರುವ ಮಹತ್ವವು ಕಂಡುಬರುತ್ತದೆ. ಇಂಥ ಮಹತ್ವಪೂರ್ಣವಾದ ಸಾಹಿತ್ಯ ಕ್ಷೇತ್ರದಲ್ಲಿಯೂ ಅಣ್ಣಾರಾಯರು ಸಾವಧಾನದಿಂದ ಸೇವೆಯನ್ನು ಸಲ್ಲಿಸಿ ದ್ದಾರೆ, ಸಲ್ಲಿಸುತ್ತಿದ್ದಾರೆ.

ಅಣ್ಣಾರಾಯರು ಈ ವರೆಗೆ ಸಂಶೋಧಿಸಿ, ಪ್ರಕಟಿಸಿದ ಗ್ರಂಥಗಳಲ್ಲಿ 'ಚಿನ್ಮಯ ಚಿಂತಾಮಣಿ' ಹಾಗೂ 'ಭರತೇಶ ವೈಭವ ಶೋಭನ ಸಂಧಿಗಳು' ಮುಖ್ಯವಾಗಿವೆ. 'ಚಿನ್ಮಯ ಚಿಂತಾಮಣಿ'ಯನ್ನು ಪರಿವರ್ಧಿನಿ ಷಟ್ಪದಿಯ ಕೊನೆಯ ಚರಣವನ್ನು ಹಾಡಲಿಕ್ಕೆ ಅನುಕೂಲವಾಗುವಂತೆ ಮಾರ್ಪಡಿಸಿ ಕೊಂಡು, ಅದನ್ನು ಹಂಚಿ ಎರಡು ಚರಣಗಳನ್ನಾಗಿ ಕವಿಯು ಮಾಡಿ ಕೊಂಡು, ಒಂದು ಹೊಸ ಚೌಪದಿಯನ್ನು ಸೃಷ್ಟಿಸಿಕೊಂಡು ರಚಿಸಿದ್ದಾನೆ.† ಈ ರೀತಿ ಕನ್ನಡ ಸಾಹಿತ್ಯದಲ್ಲಿಯೇ ಹೊಸ ಮಾದರಿಯದಾದ ೧೦೫ ಪದ್ಯ ಗಳಲ್ಲಿ ಅಧ್ಯಾತ್ಮ ರಸಗಂಗೆಯನ್ನು ಕವಿಯು ಹರಿಸಿದ್ದಾನೆ. ಇಂಥ ಛಂದಸ್ಸಿನ ಮಾರ್ಪಾಟುಗಳಲ್ಲಿ ಇಂದಿನವರಂತೆ ಹಿಂದಿನವರೂ ಹೇಗೆ ಹೊಸ ಹೊಸ ಪ್ರಯೋಗಗಳನ್ನು ಮಾಡುತಿದ್ದರೆಂಬುದನ್ನು ಇದೇ ಕಲ್ಯಾಣಕೀರ್ತಿ ಕವಿಯ

---

* ಹಳಗನ್ನಡ ಕಾವ್ಯಮಾಲೆಯ 'ಹಿರಿಯರ ಹರಕೆ'ಗಳಿಂದ.

† 'ಚಿನ್ಮಯ ಚಿಂತಾಮಣಿ' ಭೂಮಿಕೆ ಪುಟ ೨೦.

'ಅನುಪ್ರೇಕ್ಷೆ'ಯಿಂದಲೂ ಪದ್ಯವೊಂದನ್ನು ಎತ್ತಿ, ಸಂಪಾದಕರು ಅದರ ಛಂದೋಲಕ್ಷಣಗಳನ್ನೂ ಇಲ್ಲಿ ವಿವೇಚಿಸಿದ್ದಾರೆ. ಕನ್ನಡ ಛಂದೋವಿಕಾಸ ವನ್ನು ಅಭ್ಯಸಿಸುವವರು ಇವುಗಳನ್ನೆಲ್ಲ ಗಮನಿಸಬಹುದಾಗಿದೆ. ಇದರಂತೆಯೇ 'ಭರತೇಶ ವೈಭವದ ಶೋಭನ ಸಂಧಿಗಳ' ಪೀಠಿಕೆಯಲ್ಲಿ ಅಲ್ಲಿಯ ತ್ರಿಪದಿಯು ಬೆಳೆದು, ರತ್ನಾಕರನ ಮುಂದಿನ 'ಭರತೇಶ ವೈಭವ'ದ ಸಾಂಗತ್ಯ ರೂಪು ಗೊಂಡ ಬಗೆಯನ್ನೂ ಸಂಶೋಧನೆಯ ದೃಷ್ಟಿಯಿಂದ ವಿವೇಚಿಸಿದುದನ್ನು ನಾವು ಲಕ್ಷಿಸಬೇಕು.

ಇನ್ನು 'ಚಿನ್ಮಯ ಚಿಂತಾಮಣಿ'ಯು ಮೊದಲು ಒಂದೆರಡು ಸಲ ಅಲ್ಲಿ ಇಲ್ಲಿ ಪ್ರಕಟವಾಗಿದ್ದರೂ ಅನೇಕ ಪ್ರತಿಗಳ ಸಹಾಯದಿಂದ ಸಂಶೋಧನ ಗೊಂಡು, ಶುದ್ಧ ರೂಪ, ವಿಸ್ತಾರವಾದ ಭೂಮಿಕೆ, ಸರಳವಾದ ಟೀಕೆ-ಟಿಪ್ಪಣಿಗಳಿಂದ ಸಂಪಾದಿತವಾಗಿ ಮೊದಲ ಸಲ ಬೆಳಕನ್ನು ಕಂಡುದು ಮಿರ್ಜಿಯವರಿಂದಲೇ ಎಂದು ಹೇಳಬೇಕು. ಅದರಲ್ಲೂ ಮಿರ್ಜಿಯವರು ಈ ಅಧ್ಯಾತ್ಮ ಗ್ರಂಥದ ಕರ್ತೃವಾದ ಕಲ್ಯಾಣಕೀರ್ತಿಯ ಗುರುಪರಂಪರೆ ಯನ್ನು ಸಂಶೋಧಿಸಿ, ಪ್ರಕಟಿಸುವಲ್ಲಿ ಎಲ್ಲರೂ ಮೆಚ್ಚುವಂತಹ ಜಾಣ್ಮೆಯನ್ನು ಪ್ರದರ್ಶಿಸಿದ್ದಾರೆ. ಕ್ರಿ. ಶ. ಪೂರ್ವದಲ್ಲಿದ್ದ 'ನಿರ್ಗ್ರಂಥ ಮಹಾಶ್ರಮಣ ಸಂಘ'ವು 'ಮೂಲ ಸಂಘ'ವೆನಿಸಿ, ಶ್ವೇತಾಂಬರರಿಂದ ಪೃಥಕತ್ವವನ್ನು ತೋರಿಸಿಕೊಂಡಿತು. ಮುಂದೆ ಆ ಮೂಲ ಸಂಘದಲ್ಲಿಯೂ ವಿವಿಧ ಶಾಖೆಗಳು ಕಾಲಕಾಲಕ್ಕೆ ಹುಟ್ಟಿಕೊಂಡುವು. ಇಂಥ ಒಂದು ಪ್ರಾದೇಶಿಕ ಶಾಖೆಯಲ್ಲಿ ಲಲಿತ ಕೀರ್ತಿಗಳ ಶಿಷ್ಯನಾಗಿ ಕಲ್ಯಾಣ ಕೀರ್ತಿಯು ಕಾರ್ಕಳದಲ್ಲಿ ಜನಿಸಿದನು. ಹೀಗೆ ಕ್ರಿ. ಶ. ಪೂರ್ವಕಾಲದಿಂದಲೂ ಹದಿನೈದನೆಯ ಶತಮಾನದ ಮಧ್ಯದ ವರೆಗೂ ಆದ ಜೈನಮುನಿ ಸಂಘಗಳ ವಿಕಾಸ ಹಾಗೂ ಪರಂಪರೆಗಳನ್ನು ಕ್ರಮಬದ್ಧವಾಗಿ, ಶ್ರವಣಬೆಳ್ಗೊಳದ ಶಿಲಾಲೇಖ, ಇತರ ಸಾಹಿತ್ಯಿಕ ಗ್ರಂಥಗಳ ಆಧಾರದಿಂದ ನಿರೂಪಿಸಿದ್ದಾರೆ. ಇದು ಕನ್ನಡ ದಲ್ಲಿ ಸಂಶೋಧನ ನಡೆಯಿಸುವವರಿಗೆ ಹೊಸ ಕ್ಷೇತ್ರವನ್ನು ನಿರ್ಮಿಸಿ ಕೊಡುತ್ತದೆ. ಈ ಶ್ರೇಯವು ಅಣ್ಣಾರಾಯರಿಗಿದೆ.

'ಚಿನ್ಮಯ ಚಿಂತಾಮಣಿ'ಗೆ ಮಿರ್ಜಿಯವರು ಬರೆದ ಭೂಮಿಕೆಯನ್ನು ಓದಿದವರಿಗೆ ಅಧ್ಯಾತ್ಮಿಕ ಕ್ಷೇತ್ರದಲ್ಲಿ ತುಲನಾತ್ಮಕ ಅಭ್ಯಾಸಮಾಡುವ ಪ್ರವೃತ್ತಿಯು ಸಂಪಾದಕರಲ್ಲಿದ್ದುದು ಎಲ್ಲರಿಗೂ ಕಂಡುಬರುತ್ತದೆ. ಉಚ್ಚ

ಮಟ್ಟದ ಅಧ್ಯಾತ್ಮಿಕ ವ್ಯಕ್ತಿಗಳ ದರ್ಶನ, ವಿಚಾರ, ಭಾವಗಳು ಸಮಾಂತರ ವಾಗಿಯೇ ಹರಿಯುತ್ತವೆಂಬುದನ್ನು ವೈದಿಕ, ಬೌದ್ಧ, ಶೈವ, ಜೈನ ದಾರ್ಶನಿಕರ ಅನುಭಾವ ವಚನಗಳನ್ನು ಕೊಟ್ಟು, ಇಲ್ಲಿ ತೌಲನಿಕವಾಗಿ ವಿವರಿಸಿದ್ದಾರೆ.* ಈ ರೀತಿಯ ಅಭ್ಯಾಸಕ್ಕೆ ಕನ್ನಡದಲ್ಲಿ ಈ ಮೂಲಕ 'ನಾಂದಿ'ಯನ್ನು ಹಾಡಿದರೆಂದು ಹೇಳಬಹುದು. ಇದೇ ದೃಷ್ಟಿಯು ಅವರ 'ಜೈನ ಧರ್ಮ'ವೆಂಬ ಬೃಹದ್‌ಗ್ರಂಥದಲ್ಲಿ ಭವ್ಯರೂಪವನ್ನು ತಾಳಿ ನಿಂತಿದೆ. ಈ ಸರ್ವಧರ್ಮ ಸಮನ್ವಯ ದೃಷ್ಟಿಯು ಮಿರ್ಜಿಯವರ ಬೆಳವಣಿಗೆಯ ವೈಶಿಷ್ಟ್ಯವಾಗಿದೆ. ಇದರ ದಿಗ್ದರ್ಶನದಿಂದ 'ಚಿನ್ಮಯ ಚಿಂತಾಮಣಿ'ಗೊಂದು ಕನ್ನಡ ವಾಙ್ಮಯದಲ್ಲಿ ಮಹತಿಯು ಪ್ರಾಪ್ತವಾಗಿದೆ.

ಇನ್ನು 'ಭರತೇಶ ವೈಭವ ಶೋಭನ ಸಂಧಿಗಳ' ಸಂಶೋಧನೆಯಂತೂ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಗಣ್ಯವಾದ ಸ್ಥಾನವನ್ನು ಪಡೆದಿದೆ. ಅವು ಗಳನ್ನು ಮೊದಲ ಸಲ ಅಣ್ಣಾರಾಯರು ಸಂಶೋಧಿಸಿ 'ಜೀವನ' ಪತ್ರಿಕೆಯಲ್ಲಿ ಪ್ರಕಟಿಸಿದಾಗ, ಕನ್ನಡನಾಡಿನ ಸಂಶೋಧಕರ ಗಮನವನ್ನು ಅದು ಸಂಪೂರ್ಣ ವಾಗಿ ಸೆಳೆಯಿತು. ಈ ನವೀನವಾಗಿ ದೊರೆತ ಸಂಧಿಗಳು ಭರತೇಶ ವೈಭವ ದಂತೆ ಸಾಂಗತ್ಯದಲ್ಲಿ ಇರದೆ, ತ್ರಿಪದಿಗಳಲ್ಲಿ ಇದ್ದುದಕ್ಕೆ ಇವು ರತ್ನಾಕರ ಕವಿಯದು ಅಹುದೋ ಅಲ್ಲವೋ—ಎಂಬ ಶಂಕೆಯನ್ನು ಎತ್ತಲಾಯಿತು.† ಹೀಗೆ ನಡೆದ ಚರ್ಚೆಗಳಿಗೆಲ್ಲ ಮಿರ್ಜಿಯವರು, ಗ್ರಂಥರೂಪದಲ್ಲಿ ಇವುಗಳನ್ನು ಪ್ರಕಟಿಸುವಾಗ ಸಮಾಧಾನಕರವಾಗಿ, ಸಾಧಾರವಾಗಿ ಪ್ರಸ್ತಾಪನೆಯಲ್ಲಿ ಉತ್ತರಿಸಿದ್ದಾರೆ. ಅಲ್ಲದೆ ಈ ಶೋಭನ ಸಂಧಿಗಳಲ್ಲಿರುವ ಕಾವ್ಯಗುಣವನ್ನು ವ್ಯಕ್ತಪಡಿಸಿ ತೋರಿಸುವ ಅಭ್ಯಾಸಪೂರ್ಣವಾದ ವಿವರಣೆ ಹಾಗೂ ಕಠಿಣ ಪದಗಳ ಕೋಶಗಳೊಡನೆ ಗ್ರಂಥವು ಸ್ವಯಂಪೂರ್ಣವಾಗುವಂತೆ ಸಂಪಾದಿಸಿ, ಕನ್ನಡಿಗರ ಕೈಗೆ ಅರ್ಪಿಸಿದ್ದಾರೆ, ಮಿರ್ಜಿಯವರು.

ಇವೆರಡೂ ಗ್ರಂಥಗಳ ಸಂಶೋಧನೆ ಹಾಗೂ ಸಂಪಾದನೆಯಲ್ಲಿ ಶ್ರೀಯುತರು ವ್ಯಕ್ತಪಡಿಸಿದ ತಮ್ಮ ಆಳವಾದ ವಿದ್ವತ್ತು, ತಲಸ್ಪರ್ಶಿಯಾದ ಜ್ಞಾನ, ಮೂಲಗ್ರಾಹಿಯಾದ ಸಂಶೋಧಕತೆ, ವಿಶಾಲವಾದ ಅಭ್ಯಾಸ, ತುಲನಾತ್ಮಕ ದೃಷ್ಟಿಕೋನಗಳನ್ನು ನೋಡಿದರೆ ಯಾರೂ ತಲೆದೂಗುವಂತಿದೆ.

---

* 'ಚಿನ್ಮಯ ಚಿಂತಾಮಣಿ'ಯ ಭೂಮಿಕೆ ೧೧–೧೨–೧೩ ಪುಟ.

† 'ಜೀವನ' ಮಾಸಪತ್ರಿಕೆ ಸಂಪುಟ ೫; ಸಂಚಿಕೆ ೧೦.

ಹೊಸಗನ್ನಡದಲ್ಲಿ ಉಚ್ಚವಾದ ವಿಮರ್ಶೆ, ಸಮೃದ್ಧವಾದ ಸಂಶೋಧನಗಳು ನಡೆಯಬೇಕೆಂದು ಬಹುಜನರು ಬಯಸುತ್ತಿದ್ದಾರೆ. ಈ ಬಯಕೆಯನ್ನು ಪೂರೈಸುವವರಲ್ಲಿ ತಮ್ಮ ವೈಶಿಷ್ಟ್ಯಪೂರ್ಣವಾದ ದಾರಿಯಲ್ಲಿ ಮುನ್ನಡೆಯು ತ್ತಿದ್ದಾರೆ, ಅಣ್ಣಾರಾಯರು. ಜನತೆಯಲ್ಲಿ ಸಂಸ್ಕಾರವು ಹೆಚ್ಚಿದಂತೆ ಇವರ ಸಂಶೋಧನೆಗೆ ಕನ್ನಡನಾಡಿನಲ್ಲಿ ಇನ್ನೂ ಹೆಚ್ಚಿನ ಕಾಂತಿಯು ಒದಗುತ್ತದೆ. ಅದರಿಂದ ಇವರಿಗೆ ಶ್ರೇಯಸ್ಸು ಲಭಿಸಲೆಂದು ಕೋರುವೆ.

# “ಜೈನಧರ್ಮ”ವನ್ನು ಕುರಿತು

## ೧

ಶ್ರೀ. ಡಿ. ಪುಟ್ಟಸ್ವಾಮಿ, ಬಿ.ಎ., ಬಿ.ಎಲ್., ಮಂಗಳೂರು.

ಜ್ಞಾನ ಹಾಗೂ ವಿವೇಕ ಪ್ರಧಾನವಾದ ಜೈನಧರ್ಮದ ಸಮಗ್ರ ವಿಚಾರಗಳನ್ನು ಒಂದೆಡೆಯಲ್ಲಿ ಸಂಗ್ರಹಿಸಿದ ಮಹಾಗ್ರಂಥವೇ ಈ “ಜೈನಧರ್ಮ”. ಕಥೆ, ಕಾದಂಬರಿ, ಲೇಖನಾದಿಗಳಿಂದ ಪ್ರಸಿದ್ಧರಾದ ಶ್ರೀ ಮಿರ್ಜಿ ಅಣ್ಣಾರಾಯರು ಈ ಹಿರಿ ಹೊತ್ತಗೆಯ ಕರ್ತೃಗಳು.

ಈ ಗ್ರಂಥದ ಮೊದಲಿನ ೪೪ ಪುಟಗಳಲ್ಲಿ ಗ್ರಂಥಕರ್ತರ ಆತ್ಮನಿವೇದನೆ, ಡಾ। ಆ. ನೇ. ಉಪಾಧ್ಯೆಯವರು ಬರೆದ ಮುನ್ನುಡಿ, ಪರಿವಿಡಿ, ಚಿತ್ರಸೂಚಿ ಮತ್ತು ಸಹಾಯಕ ಸಾಹಿತ್ಯಾದಿಗಳಿವೆ. ಮತ್ತಿನ ೮೬೮ ಪುಟಗಳಲ್ಲಿ ಗ್ರಂಥ ವಿಷಯ ವಿವರಣೆಯೂ, ೪೫ ಪುಟಗಳಲ್ಲಿ ಜೈನಧರ್ಮ ಪರಿಭಾಷೆ, ಗ್ರಂಥಗಳ ನಾಮಸೂಚಿ, ವ್ಯಕ್ತಿಗಳ ನಾಮಸೂಚಿ, ಕೆಲವು ಸ್ಥಳಗಳ ನಾಮಸೂಚಿ, ಎಂಬ ೪ ಪರಿಶಿಷ್ಟಗಳೂ ಇವೆ.

“ಆಚಾರ್ಯರೆಲ್ಲರು, ಧರ್ಮದ ಪ್ರಚಾರ ಹಾಗೂ ಪರಿಪಾಲನೆಯು ಶಾಸ್ತ್ರಗಳ ಆಧಾರದಿಂದಲೇ ಆಗುವದೆಂದು ತಿಳಿದಿದ್ದರು. ಅದಕ್ಕಾಗಿಯೇ ಅವರು ಕಾಲಕಾಲಕ್ಕೆ ಅನೇಕ ಭಾಷೆಗಳಲ್ಲಿ ಗ್ರಂಥ ರಚಿಸಿದರು. ಆದರೂ ಕಾರಣಾಂತರಗಳಿಂದ ಶಾಸ್ತ್ರಗಳ ಅಭ್ಯಾಸವು ಹಿಂದೆ ಬಿದ್ದು, ಧರ್ಮದ ತಿರುಳನ್ನೂ ಸ್ವರೂಪವನ್ನೂ ತಿಳಿದು ಚಾರಿತ್ರವನ್ನು ತಿದ್ದಿಕೊಳ್ಳುವುದು ಇಂದಿನ ಕಾಲದಲ್ಲಿ ದುಸ್ತರವಾಗಿದೆ. ಆಗಮಗಳನ್ನು ಅರಿತುಕೊಳ್ಳುವುದರಲ್ಲಿ ಅಶಕ್ತತೆ, ಚಾರಿತ್ರದ ಪರಿವರ್ತಿತರೂಪ, ಈ ಎರಡು ಕಾರಣಗಳಿಂದಾಗಿ ಈಗ ಧರ್ಮಾಧರ್ಮಗಳ ಸ್ವರೂಪ ನಿರ್ಣಯವೇ ಒಂದು ಸಮಸ್ಯೆಯಾಗಿ ನಿಲ್ಲುವುದು. ಇದನ್ನು ತುಸುಮಟ್ಟಿಗೆ ಬಿಡಿಸುವ ಪ್ರಯತ್ನವನ್ನು ಈ “ಜೈನಧರ್ಮ” ಪ್ರಬಂಧದ ಬರವಣಿಗೆಯಿಂದ ಮಾಡಲಾಗಿದೆ. ಇಲ್ಲಿ ಬಹುತರ ಸಮಗ್ರ ವಿಷಯಗಳನ್ನು, ಒತ್ತಟ್ಟಿಗೆ ಶಕ್ಯವಿದ್ದಷ್ಟು ಸುಲಭ ಭಾಷೆಯಲ್ಲಿ ವಿವರಿಸುವ ಪ್ರಯತ್ನ ಮಾಡಿದೆ. ಅಲ್ಲದೆ ಜೈನಧರ್ಮದ ಮೂಲ

ಧ್ಯೇಯ, ಸಾಧನೆಯ ಕ್ರಮಗಳನ್ನು ಬಿತ್ತರಿಸಿದೆ"—ಎಂದು ಗ್ರಂಥಕರ್ತರು ತಮ್ಮ ಆತ್ಮನಿವೇದನೆಯಲ್ಲಿ ಹೇಳಿಕೊಂಡ ವಿಚಾರಗಳು ತೀರ ಸತ್ಯವಿದ್ದು ಇಂತಹ ಒಂದು ಗ್ರಂಥವು ಕನ್ನಡದಲ್ಲಿ ಅತಿ ಅಗತ್ಯವಾಗಿತ್ತು.

ಈ ಬ್ರಹತ್‌ಗ್ರಂಥದಲ್ಲಿ ೧೪ ಪ್ರಕರಣಗಳಿವೆ. ಮೊದಲ **ಭೂಮಿಕೆ** ಎಂಬ ಪ್ರಕರಣದಲ್ಲಿ ಜೈನಧರ್ಮದ ವೈಚಾರಿಕ ತಳಹದಿಯನ್ನು ಮತ್ತು ವಿಶಿಷ್ಟ ಲಕ್ಷಣಗಳನ್ನು ಹೇಳಿದೆ. ಇದು ಮುಂದೆ ಗ್ರಂಥದಲ್ಲಿ ವಿವರಿಸಿದ ವಿಚಾರಗಳಿಗೊಂದು ಹಿನ್ನೆಲೆಯಾಗಿ ನಮ್ಮನ್ನು ವಿಷಯ ಗ್ರಹಣಕ್ಕೆ ತಯಾರು ಗೊಳಿಸುತ್ತದೆ. ಜೈನಧರ್ಮವೆಂದರೇನು? ಶ್ರಮಣ ಪರಂಪರೆ ಮತ್ತು ಜೈನಧರ್ಮದ ಇತಿಹಾಸ, ಜೈನಶ್ರುತವಿದ್ಯೆ, ಜೈನಧರ್ಮದ ಸ್ಯಾದ್ವಾದ, ಅಹಿಂಸೆಯ ಅರಿವು, ಕರ್ಮ ಮತ್ತು ಪುನರ್ಜನ್ಮ, ಲೋಕವಿಚಾರ, ಚಾರಿತ್ರ ವಿಕಾಸದ ಚಿತ್ರ, ಸಂಸ್ಕೃತಿ-ಸಾಹಿತ್ಯಗಳು, ವಿಶ್ವಕಲ್ಯಾಣವೆಂಬ ವಿಚಾರಗಳನ್ನು ದಿಗ್ದರ್ಶನ ರೂಪದಲ್ಲಿ ಮಂಡಿಸಿದ್ದಾರೆ. "ವ್ಯಕ್ತಿಯ ಪೂರ್ಣತೆಗೂ ಆಧ್ಯಾತ್ಮಿಕ ತತ್ವಕ್ಕೂ ಸಮನ್ವಯ ಮಾಡುವುದೇ ಧರ್ಮವೆಂದು ಮನೋವೈಜ್ಞಾನಿಕ ದೃಷ್ಟಿಯಿಂದ ಹೇಳಲಾಗುತ್ತಿದೆ" ಎಂದೂ "ಜೈನ ಪರಂಪರೆಯನ್ನು ಧಾರ್ಮಿಕ, ತಾತ್ವಿಕ, ಸಾಂಸ್ಕೃತಿಕ ಮತ್ತು ವೈಜ್ಞಾನಿಕ ದೃಷ್ಟಿಯಿಂದ ಅವಲೋಕಿಸಲು ಇಲ್ಲಿ ಯತ್ನಿಸಲಾಗಿದೆ" ಎಂದೂ ಗ್ರಂಥಕರ್ತರು ತಮ್ಮ ದೃಷ್ಟಿಕೋನದ ಪರಿಚಯ ಮಾಡಿಕೊಟ್ಟಿದ್ದಾರೆ.

ಎರಡನೆಯ **ಇತಿಹಾಸ**ವೆಂಬ ಪ್ರಕರಣದಲ್ಲಿ ಧರ್ಮೇತಿಹಾಸದ ಹೊಸ ಕಲ್ಪನೆಗಳನ್ನು ವಿವರಿಸಿ, ಜೈನ ಪರಂಪರೆಯನ್ನೂ ಜೈನೇತರ ಪರಂಪರೆಯನ್ನೂ ಸಂಗ್ರಹಿಸಿದ್ದಾರೆ. ಆ ಬಳಿಕ ಐತಿಹಾಸಿಕ ಪ್ರಮಾಣಗಳನ್ನು ಹೇಳಿ, ಮನು ಗಳಿಂದ ಮಾನವ ಜನಾಂಗ ವಿಕಾಸವೆಂತಾಯಿತೆಂಬುದನ್ನೂ ತೀರ್ಥಂಕರರ ಚರಿತ್ರೆಯನ್ನೂ ಸಂಗ್ರಹವಾಗಿ ವಿವರಿಸಿದ್ದಾರೆ. ಅನಂತರ ಜೈನಧರ್ಮದ ಸಂಪ್ರದಾಯಗಳನ್ನೂ ಭಾರತದ ಬೇರೆ ಬೇರೆ ಪ್ರಾಂತಗಳಲ್ಲಿ ಜೈನಧರ್ಮವು ಬೆಳೆದುದನ್ನೂ ತಿಳಿಸಿದ್ದಾರೆ. ಕರ್ನಾಟಕದಲ್ಲಿ ಜೈನಧರ್ಮವೆಂಬುದನ್ನು ಸ್ವಲ್ಪ ದೀರ್ಘವಾಗಿ ವಿವರಿಸುವುದು ಯೋಗ್ಯವೇ ಆಗಿದೆ. ಈ ಪ್ರಕರಣದಲ್ಲಿ ಜೈನಧರ್ಮದ ಅಭ್ಯುದಯ, ಅದರ ಮೇಲಾದ ಪ್ರತಿಕ್ರಿಯೆ, ಅದರ ಅವನತಿಯ ಕಾಲ, ಅದು ತಲೆಯೆತ್ತಿ ನಿಲ್ಲಲು ಅದರಲ್ಲಿರುವ ತತ್ತ್ವಗಳನ್ನು ತಿಳಿಯಾದ ಭಾಷೆಯಲ್ಲಿ ತಾಳ್ಮೆಯಿಂದ ವಿವರಿಸಿದ್ದಾರೆ.

ಆ ಮೇಲಿನ **ಆಗಮಗಳು, ಸ್ಯಾದ್ವಾದ ದೃಷ್ಟಿ, ಅಹಿಂಸೆಯ ನೆಲೆ ಬೆಲೆ, ಆತ್ಮಮೀಮಾಂಸೆ, ಕರ್ಮವಿಜ್ಞಾನ, ಸೃಷ್ಟಿಯ ಸ್ವರೂಪ**— ಎಂಬ ಆರು ಪ್ರಕರಣಗಳು ಜೈನಧರ್ಮದ ವಿಶಿಷ್ಟವಾದ ವಿಚಾರವನ್ನೊಳಗೊಂಡವುಗಳು. ಇವುಗಳನ್ನು ಪ್ರತಿಪಾದಿಸುವಾಗ ಗ್ರಂಥಕರ್ತರು ವೇದೋಪನಿಷತ್ತುಗಳಲ್ಲಿ ಈ ವಿಚಾರಸರಣಿಯು ಯಾವ ರೀತಿಯಲ್ಲಿದೆಯೆಂಬುದನ್ನು ತುಲನಾತ್ಮಕವಾಗಿ ಮುಂಡಿಸಿದ್ದಾರೆ. ಸ್ಯಾದ್ವಾದದಷ್ಟೇ ಮಹತ್ವವುಳ್ಳ ಅಹಿಂಸೆಯ ವಿವರಣವು ವಿಸ್ತಾರವಾಗಿ ಬಂದಿದೆ. ಅದರಂತೆ ಜೈನಧರ್ಮದಲ್ಲಿ ವಿಶೇಷಾರ್ಥವುಳ್ಳ 'ಕರ್ಮ' ಪದದ ವಿವರವೂ ಜಗತ್ತಿನ ದರ್ಶನಗಳಲ್ಲಿರುವ ಕರ್ಮವಿಚಾರವೂ ಈ ಭಾಗದಲ್ಲಿ ವಿವರವಾಗಿ ಬೆಳೆದಿದೆ.

ಅನಂತರ **ಚಾರಿತ್ರ ಮತ್ತು ಜೀವನವಿಕಾಸ, ಸಾಧಕನ ಗುಣಸ್ಥಾನ**ಗಳೆಂಬ ಎರಡು ಪ್ರಕರಣಗಳಲ್ಲಿ ಧರ್ಮದ ಫಲಶ್ರುತಿಯೇ ಹೇಳಲ್ಪಟ್ಟಿದೆ. ಈ ಪುಸ್ತಕವನ್ನೋದುವವರು ಈ ಭಾಗವನ್ನು ವಿಶೇಷ ಗಮನದಲ್ಲಿಟ್ಟು ಮನನಮಾಡಬೇಕಾಗಿದೆ. ಧರ್ಮದಿಂದ ಸ್ಫೂರ್ತಿಗೊಂಡು ಸದಾಚಾರಸಂಪನ್ನನಾಗಿ ಸುಖಪಡುವವನಿಗಿಲ್ಲಿ ಧರ್ಮಸುಮಾರ್ಗವು ತೆರೆದು ತೋರುವುದು. ಕೊನೆಯ **ಜೈನಸಂಸ್ಕೃತಿ, ಜೈನಸಾಹಿತ್ಯ, ಜೈನಧರ್ಮ ಮತ್ತು ಇತರ ಧರ್ಮಗಳು, ವಿಶ್ವಕಲ್ಯಾಣ ಮತ್ತು ಜೈನಧರ್ಮ** ಎಂಬ ನಾಲ್ಕು ಪ್ರಕರಣಗಳು ವಿಚಾರವೈವಿಧ್ಯದಿಂದ ಕೂಡಿ ಓದುವವರಲ್ಲಿ ಕುತೂಹಲವನ್ನುಂಟುಮಾಡುವಂತಿದೆ; ಮತ್ತು ಅವುಗಳ ಕ್ಷೇತ್ರವಾದರೂ ಸಫಲವಾಗಿರುವುದು ವ್ಯಕ್ತವಾಗುವುದು ಜೈನಸಂಸ್ಕೃತಿಯ ಆಂತರಿಕ ಮತ್ತು ಬಾಹ್ಯ ಸ್ವರೂಪಗಳಾವುವು? ಕಲೆ ಮತ್ತು ಜೀವನದೃಷ್ಟಿಯಿಂದ ಅವೆಲ್ಲವುಗಳ ಪ್ರಭಾವಗಳೆಂಥವು? ಜೈನಸಾಹಿತ್ಯವು ಪ್ರಾಕೃತ, ಸಂಸ್ಕೃತ, ಅಪಭ್ರಂಶ, ಗುಜರಾತಿ, ಹಿಂದೀ, ತಮಿಳು, ತೆಲುಗು ಮತ್ತು ಕನ್ನಡ ಭಾಷೆಗಳಲ್ಲಿ ಹೇಗೆ ಬೆಳೆದು ಬಂದಿದೆ? ಈ ಎಲ್ಲ ಭಾಷೆಗಳ ವಿಕಾಸಕ್ಕೆ ಜೈನಾಚಾರ್ಯರು ಮತ್ತು ಶ್ರಾವಕರು ಸಲ್ಲಿಸಿದ ಸೇವೆಯೇನು? ಎಂಬಂಶಗಳೆಲ್ಲ ವಿವರವಾಗಿ ಪ್ರತಿವಾದಿತವಾಗಿದೆ. ಇಂದಿನ ಯಾಂತ್ರಿಕ ಯುಗದಲ್ಲಿ ಜಗತ್ತಿನ ಮುಂದೆ ಹೊಸ ಹೊಸ ಸಮಸ್ಯೆಗಳು ಉತ್ಪನ್ನವಾಗುತ್ತಿರುವಾಗ ಜೈನಧರ್ಮವು ವಿಶ್ವಕಲ್ಯಾಣಕ್ಕಾಗಿ ಯಾವ ಕಾಣಿಕೆ ಕೊಡಬಲ್ಲುದೆಂಬುದನ್ನು ಕೊನೆಯ ಪ್ರಕರಣದಲ್ಲಿ ಮಾರ್ಮಿಕವಾಗಿ ವಿವರಿಸಲಾಗಿದೆ.

ಕೊನೆಯಲ್ಲಿ "ಈ ಜೈನದರ್ಶನವು ವಿಶ್ವದ ನಿಜವಾದ ಸಂಪತ್ತಿಯಾಗಿದೆ. ಇಂಥ ತತ್ತ್ವಜ್ಞಾನದ ಸಂಪತ್ತಿಯು ಯಾವ ಒಂದು ದೇಶದ, ಒಂದು ಜಾತಿಯ, ಒಂದು ವ್ಯಕ್ತಿಯ ಅಧಿಕಾರಕ್ಕೆ ಸೇರಿದುದಲ್ಲ. ಪ್ರತಿಯೊಂದು ಜೀವಿಯೂ ಈ ಸಂಪತ್ತಿನ ಲಾಭವನ್ನು ಪಡೆಯಬೇಕು; ಪಡೆದು ತಮ್ಮ ಕಲ್ಯಾಣವನ್ನೂ ಜಗತ್ತಿನ ಕಲ್ಯಾಣವನ್ನೂ ಸಾಧಿಸಿಕೊಳ್ಳಬೇಕು" ಎಂದು ಗ್ರಂಥಕರ್ತರು ನಿಜವಾದ ಮಾನವತಾದೃಷ್ಟಿಯಿಂದ ಸಾರಿರುತ್ತಾರೆ. ಕೊನೆಯಲ್ಲಿರುವ ಪೂರಕ ಪ್ರಕರಣವು ಅಭ್ಯಾಸಿಗಳ ಮನಸ್ಸಿಗೆ ಪೂರ್ಣ ತೃಪ್ತಿಯನ್ನುಂಟು ಮಾಡುವಂತಿದೆ.

"ಈ ಗ್ರಂಥದ ವಿಷಯವ್ಯಾಪ್ತಿಯನ್ನು ನೋಡಿದರೆ, ಶ್ರೀಯುತ ಅಣ್ಣಾರಾಯ ಮಿರ್ಜಿಯವರ ವಿವಿಧವಾಚನ, ದೀರ್ಘಪ್ರಯತ್ನ ಮತ್ತು ವ್ಯಾಪಕ ದೃಷ್ಟಿ ಇವುಗಳನ್ನು ಯಾರೂ ಮೆಚ್ಚಬಹುದು. ಅವರ ಲೇಖನದಲ್ಲಿ ಪುರಾತನ ವಿಚಾರಕ್ಕೆ ಅಂಟಿಕೊಳ್ಳುವ ಪಂಡಿತರ ದುರಾಗ್ರಹವಾಗಲಿ, ಅಥವಾ ಧರ್ಮವನ್ನು ಅರಿಯದೆ ಹಳಿಯುವ ಕೆಲವು ಆಧುನಿಕ ವಿಚಾರಪ್ರವರ್ತಕರ ಉಚ್ಛೃಂಖಲ ವೃತ್ತಿಯಾಗಲಿ ಕಂಡುಬರುವುದಿಲ್ಲ. ಎಲ್ಲಿ ನೋಡಿದರೂ ಪರಿಪಕ್ವವಾದ ತುಲನಾತ್ಮಕದೃಷ್ಟಿ, ವ್ಯಾಪಕವಿಚಾರ ಮತ್ತು ಸಮನ್ವಯ ಬುದ್ಧಿ ಇವೇ ಕಣ್ಣಿಗೆ ಬೀಳುತ್ತವೆ" ಎಂದು ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆದ ಶ್ರೀ. ಆ. ನೇ. ಉಪಾಧ್ಯೆಯವರು ಬರೆದ ಮಾತು ಅತಿಶಯೋಕ್ತಿಯಲ್ಲವೆಂಬುದು ಈ ಗ್ರಂಥಾವಲೋಕನದಿಂದಲೇ ಕಂಡುಬರುವುದು. ಈ ಬೃಹದ್ ಗ್ರಂಥವನ್ನು ಸ್ವಾಗತಿಸುತ್ತ ಶ್ರೀ. ಎನ್. ಎ. ಗೋರೆಯವರು ಹೀಗೆ ಬರೆದಿದ್ದಾರೆ:—"ಸುಪ್ರಸಿದ್ಧ ಕನ್ನಡ ಲೇಖಕರಾದ ಶ್ರೀ ಅಣ್ಣಾರಾಯ ಮಿರ್ಜಿಯವರು ಕನ್ನಡದಲ್ಲಿ ಜೈನಧರ್ಮವನ್ನು ಕುರಿತು 'ಜೈನಧರ್ಮ'ವೆಂಬ ಅತ್ಯುತ್ತಮ ಗ್ರಂಥವನ್ನು ಇದೀಗ ಪ್ರಕಟಿಸಿದ್ದಾರೆ. ಅದರಲ್ಲಿ ಲೇಖಕರು ಜೈನಧರ್ಮದ ಇತಿಹಾಸವನ್ನು ಅವಲೋಕಿಸಿದ್ದಾರೆ. ಅಲ್ಲದೆ ಕರ್ಮವಿಜ್ಞಾನ, ಸ್ಯಾದ್ವಾದ ಮತ್ತು ಜೈನ ನೈತಿಕವಿಚಾರಗಳನ್ನು ವಿವರವಾಗಿ ವಿವೇಚಿಸಿದ್ದಾರೆ. ಇದಲ್ಲದೆ ಸಂಸ್ಕೃತ, ಪ್ರಾಕೃತ ಭಾಷೆಗಳ ಜೈನಸಾಹಿತ್ಯ ಮತ್ತು ಪ್ರಾಂತೀಯ ಭಾಷೆಗಳಾದ ಕನ್ನಡ, ಮರಾಠಿ, ಗುಜರಾಥಿ ಭಾಷೆಗಳ ಸಾಹಿತ್ಯವನ್ನೂ ಅವಲೋಕಿಸಿದ್ದಾರೆ. ಈ ಗ್ರಂಥವು ಜೈನ ವಿಚಾರಪದ್ಧತಿಯೊಡನೆ ಆಧುನಿಕ ಜಗತ್ತಿನ ದೃಷ್ಟಿ ಅದರ ವಿಚಾರ ಮತ್ತು ಘಟನೆಗಳನ್ನು

ತುಲನಾತ್ಮಕವಾಗಿ ವಿವೇಚಿಸುವ ಅಭ್ಯಾಸದಿಂದ ತುಂಬಿದೆ."* ಆದರೂ ಭಿನ್ನಾಭಿಪ್ರಾಯದ, ಕೆಲವರಿಗೆ ಸೇರದ, ವಿಚಾರಸರಣಿಯನ್ನು ಈ ಗ್ರಂಥದಲ್ಲಿ ಕಾಣಬಹುದಾಗಿದೆ. ಇಂಥ ದೊಡ್ಡ ಗ್ರಂಥಗಳಲ್ಲಿ ಮತಭೇದಕ್ಕೆ ಆಸ್ಪದ ದೊರೆಯುವುದು ಸ್ವಾಭಾವಿಕವೆಂದೇ ಮುನ್ನುಡಿಕಾರರು ಹೇಳಿರುವರು. ಅಷ್ಟೇ ಅಲ್ಲ, ಅದರಿಂದ ವಿಚಾರಮಥನವಾಗಿ ಸತ್ಯವುಳಿದು ಜೊಳ್ಳು ಅಳಿದು ಹೋಗುವಂತಾಗುತ್ತದೆ.

ಇಂತಹ ಮಹತ್ವವಾದ ಗ್ರಂಥವನ್ನು ರಚಿಸಿ, ಶ್ರೀ ಮಿರ್ಜಿಯವರು ಕನ್ನಡಿಗರಿಗೊಂದು ಮಹದುಪಕಾರ ಮಾಡಿರುವರೆಂದು ಬೇರೆ ಹೇಳಬೇಕಾಗಿಲ್ಲ. ಪಾರಿಭಾಷಿಕ ಶಬ್ದಗಳಿಂದ ನೀರಸವಾಗುವಂತಹ ಈ ಹಿರಿಹೊತ್ತಿಗೆಯನ್ನು ಲಲಿತವಾದ, ಮಧುಮಧುರ ಮಾತುಗಳಿಂದ ಮಿರ್ಜಿಯವರು ರಚಿಸಿರುವುದು ನಿಜವಾಗಿಯೂ ವಿಶೇಷವೆಂದೇ ಹೇಳಬೇಕಾಗಿದೆ. ಕನ್ನಡದಲ್ಲಿ ಬೆರಳಿನಿಂದ ಎಣಿಸಬಹುದಾದ ಕೆಲವೇ ಗ್ರಂಥಗಳಲ್ಲಿ ಈ ಜೈನಧರ್ಮಕ್ಕೆ ಒಂದು ಸ್ಥಾನವಿದೆಯೆಂಬುದು ನಿರ್ವಿವಾದವಾದುದು. ಧರ್ಮಶಾಸ್ತ್ರ ವಿಚಾರಗಳನ್ನೂ ತಿಳಿಯಾದ ಭಾಷೆಯಲ್ಲಿ ಸರ್ವಸಾಮಾನ್ಯರೂ ತಿಳಿಯುವಂತೆ ರಚಿಸಬಹುದೆಂಬುದನ್ನು ಶ್ರೀಯುತರು ತೋರಿಸಿರುವರಲ್ಲದೆ ಈ ಕೃತಿರತ್ನವನ್ನು ರಚಿಸಿ ತಾವೂ ಧನ್ಯರಾಗಿದ್ದಾರೆ. ಈ ಗ್ರಂಥವು ಹಳೆಗನ್ನಡ ಸಾಹಿತ್ಯಾಭ್ಯಾಸಿಗಳಿಗೂ ಜೈನಧರ್ಮದ ಮರ್ಮವನ್ನು ತಿಳಿಯಲಿಚ್ಛಿಸುವ ಸರ್ವಧರ್ಮಸಮನ್ವಯಬುದ್ಧಿಯವರಿಗೂ ಮುಖ್ಯವಾಗಿ ಜೈನರೆಲ್ಲರಿಗೂ ಒಂದು ಕೈಗನ್ನಡಿಯಂತಿದೆ. ಇಂತಹ ಮಹಾಗ್ರಂಥ ರಚಿಸಿದ ಮಿರ್ಜಿಯವರನ್ನು ಮತ್ತೊಮ್ಮೆ ಅಭಿನಂದಿಸುತ್ತೇವೆ.

---

*The well-known Kannada writer Shri Annaraya Mirji, has just published an excellent work in Kannada on Jainism: JAINA DHARMA. In it the author surveys the history of Jainism, e.g., Karma-doctrine, Syadvada, etc., and he gives a detailed treatment of Jain ethics and Jain literature in Sanskrit, Prakrit and in the regional languages· Kannada, Marathi and Gujarati. The book concludes with a survey of Jain ideology in comparison with the modern world outlook, its thought and events.

—N. A. Gore.

—*The Indian P. E. N. June 1952.*

೨

## ಸ್ವಸ್ತಿಶ್ರೀ. ಅಕಲಂಕ ಸ್ವಾಮಿಗಳವರು.

ಶ್ರೀ ಮಿರ್ಜಿ ಅಣ್ಣಾರಾಯರ 'ಜೈನಧರ್ಮ' ಗ್ರಂಥದ ಬಗ್ಗೆ ಇಲ್ಲಿ ನಾಲ್ಕು ಮಾತುಗಳನ್ನು ಬರೆಯಬೇಕೆಂದಿದ್ದೇವೆ. ಇಂಥ ಬೃಹದ್ ಗ್ರಂಥವನ್ನು ನೋಡಬಾಳದ ಸರ್ವಧರ್ಮ ಸಮ್ಮೇಲನದಲ್ಲಿ ಉದ್ಘಾಟಿಸುತ್ತ ವಿದ್ವಾಂಸರೂ ನಮ್ಮೆಲ್ಲರಿಗೂ ಹಿರಿಯರೂ ಆದ ಸ್ವಸ್ತಿಶ್ರೀ ಲಕ್ಷ್ಮಿಸೇನ ಭಟ್ಟಾರಕ ಪಟ್ಟಾಚಾರ್ಯ ಮಹಾಸ್ವಾಮಿಗಳು, ಕೊಲ್ಹಾಪುರ ಇವರು "ಪ್ರತಿಯೊಂದು ಕಾರ್ಯವು ರೂಪುಗೊಳ್ಳಲಿಕ್ಕೆ—ವ್ಯಕ್ತರೂಪಕ್ಕೆ ಬರಲಿಕ್ಕೆ—ಎರಡು ಅವಸ್ಥೆಗಳು ಇರುತ್ತವೆ. ಇಂದು ನಮ್ಮ ಮುಂದೆ ಇರುವ ಶ್ರೀ ಮಿರ್ಜಿ ಅಣ್ಣಾರಾಯರ 'ಜೈನಧರ್ಮ' ಗ್ರಂಥವು ದ್ರವ್ಯರೂಪದಲ್ಲಿದೆ. ಅದಕ್ಕೂ ಮೊದಲು ಇದು ಮಿರ್ಜಿಯವರ ಭಾವರೂಪದಲ್ಲಿತ್ತು. ಭಾವ ಶುದ್ಧವಿದ್ದಷ್ಟು ಕ್ರಿಯೆಗಳಿಗೂ ಅವುಗಳ ವ್ಯಕ್ತರೂಪಕ್ಕೂ ಪರಿಶುದ್ಧತೆಯುಂಟಾಗುತ್ತದೆ. ಈ ಗ್ರಂಥದ ಪಾವಿತ್ರ್ಯಕ್ಕೆ ಅದರ ಲೇಖಕರ ಭಾವಶುದ್ಧಿಯೇ ಕಾರಣವು. ಇಂಥ ಒಂದು ಬೃಹದ್‌ಗ್ರಂಥವನ್ನು ರಚಿಸುವದು ಸುಲಭಸಾಧ್ಯವಾದ ಕಾರ್ಯವಲ್ಲ. ಅದಕ್ಕೆ ಹಲವು ವರ್ಷಗಳ ತಪಸ್ಸು ಬೇಕಾಗುವುದು. ಪೂರ್ವಾಚಾರ್ಯರ ಅನೇಕ ಗ್ರಂಥಗಳನ್ನು ಸಾವಧಾನಚಿತ್ತದಿಂದ ಪರಿಶೀಲಿಸಬೇಕಾಗುವುದು. ತಮಗೆ ತಿಳಿಯದ ವಿಷಯಗಳನ್ನು ವಿದ್ವಾಂಸರ ಹತ್ತರ ಕೇಳಿಕೊಂಡು, ಚರ್ಚಿಸಿ ಒಂದು ನಿರ್ಣಯಕ್ಕೆ ಬರಬೇಕಾಗುವದು. ಇದು ಭಾವಸಿದ್ಧತೆ. ಇದನ್ನೆಲ್ಲ ಮಿರ್ಜಿಯವರು ಮಾಡುತ್ತ ಬಂದಿದ್ದಾರೆ. ಈ 'ಜೈನಧರ್ಮ' ಗ್ರಂಥವನ್ನು ಬರೆಯುವ ಪೂರ್ವದಲ್ಲಿ ಹಲವು ಸಲ ನಮ್ಮೊಡನೆ ಅನೇಕ ವಿಷಯಗಳನ್ನು ಚರ್ಚಿಸಿದರು, ಸಲಹೆ ಪಡೆದರು. ಆ ಮೇಲೆ ಇದನ್ನು ಬರೆದರು. . . ತರುವಾಯ ಗ್ರಂಥದ ಮುದ್ರಣ ಮಾಡಿಸಿದರು. ಇದು ದ್ರವ್ಯಸಿದ್ಧಿಯು."*—ಎಂದು ಅಪ್ಪಣೆಕೊಡಿಸಿದರು. ಶ್ರೀಗಳವರು ನುಡಿದಂತೆ ಈಗಿನ ಕರ್ನಾಟಕ ದೇಶದಲ್ಲಿ, ಕನ್ನಡ ಭಾಷೆಯಲ್ಲಿ ಇಷ್ಟು ವಿಪುಲವಾದ ವಿಷಯಗಳಿಂದ ಕೂಡಿದ ಗ್ರಂಥವು ಇನ್ನೊಂದಿರಲಾರದು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದೆಂದು ನಮ್ಮಗಳ ಭಾವನೆಯಾಗಿದೆ.

---

* ಜಿನವಿಜಯ, ಎಪ್ರೇಲ ೧೯೫೨.

ನಮ್ಮ ನಾಡಿನ ರಾಜರ್ಷಿಗಳೆಂದು ಸರ್ವ ಸಮಾಜದಿಂದಲೂ ತ್ಯಾಗಿಗಳ ವರ್ಗದಿಂದಲೂ ಮನ್ನಿಸಲ್ಪಡುತ್ತಿದ್ದ ದಿವಂಗತ ಶ್ರೀ ಧರ್ಮಸ್ಥಳ ಮಂಜಯ್ಯ ಹೆಗ್ಗಡೆಯವರು "ಜೈನಧರ್ಮವೆಂಬ ಈ ಗ್ರಂಥದಲ್ಲಿರುವ ವಿಷಯಗಳು ಐತಿಹಾಸಿಕ ದೃಷ್ಟಿಯಿಂದಲೂ ತಾತ್ವಿಕ ದೃಷ್ಟಿಯಿಂದಲೂ ಬಹಳ ಅನುಭವವನ್ನುಂಟು ಮಾಡುವ ಸಂಗತಿಗಳಾಗಿವೆ. ಇದರಿಂದ ಜೈನೇತರರು ಜೈನಧರ್ಮವನ್ನು ವಿವರವಾಗಿ ಪರಿಚಯ ಮಾಡಿಕೊಳ್ಳಲು ಬರುವಂತಿದೆ." ಎಂದು ತಮ್ಮ ದಿವ್ಯಚಿತ್ತದ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಈ ಗ್ರಂಥದಲ್ಲಿ ಉಲ್ಲೇಖಿಸಿದ, ಪರಿಚಯ ಮಾಡಿಕೊಟ್ಟ, ಎಲ್ಲಾ ಭಾಷೆ ಹಾಗು ಧರ್ಮಗಳ ಗ್ರಂಥಗಳನ್ನು ಪರಿಗಣಿಸಿದರೆ ಅವುಗಳ ಸಂಖ್ಯೆಯು ಹನ್ನೆರಡು ನೂರಕ್ಕೂ ಮಿಕ್ಕುವದು. ಅಲ್ಲದೆ ಈ ಬೃಹದ್ಗ್ರಂಥದಲ್ಲಿ ಜೈನಧರ್ಮ ಮತ್ತು ಇತರ ಧರ್ಮಗಳಿಗೆ ಸಂಬಂಧಿಸಿದ ಒಂದು ಸಾವಿರಕ್ಕೂ ಮಿಗುವಷ್ಟು ವಿಷಯಗಳನ್ನು ವಿವೇಚಿಸಲಾಗಿದೆ. ಅದೂ ತುಲನಾತ್ಮಕವಾಗಿ ತೂಕದ ಭಾಷೆಯಲ್ಲಿ ಲೇಖಕರು ವಿವರಿಸಿದ್ದಾರೆ. ಇವೆಲ್ಲ ಇವರ ಶಕ್ತಿ, ಪ್ರತಿಭೆ ಮತ್ತು ತಾಳ್ಮೆಗಳನ್ನು ಎತ್ತಿ ತೋರಿಸುತ್ತವೆ. ಇವನ್ನೆಲ್ಲ ಗಮನಿಸಿಯೇ ಪೂಜ್ಯ ಗುರುವರ್ಯ, ಶ್ರವಣಬೆಳಗೊಳದ ನಿವೃತ್ತಮಠಾಧೀಶರಾದ ಸ್ವಸ್ತಿಶ್ರೀ ನೇಮಿಸಾಗರ ಸ್ವಾಮಿಗಳವರು "ನಮ್ಮ ಸಮಾಜದ ಯುವಕರೊಬ್ಬರು ಇಂಥ ಹೆಬ್ಬೊತ್ತಿಗೆಯನ್ನು ಈ ಕಾಲದಲ್ಲೂ ರಚಿಸಿದರಲ್ಲ! ಯಾವ ಕಾಲದಲ್ಲೂ ನಮ್ಮ ಧರ್ಮಕ್ಕೆ, ಸಾಹಿತ್ಯಕ್ಕೆ ಚ್ಯುತಿಯೆಂಬುದಿಲ್ಲ."* ಎಂದು ಹರ್ಷೋದ್ಗಾರವನ್ನು ತೆಗೆದರು. ಅಂಥ ವಿದ್ವಾಂಸರ ನುಡಿ ನಮ್ಮೆಲ್ಲರ ತಲೆದೂಗಿಸುತ್ತದೆ. ನೇಮಿಸಾಗರ ವರ್ಣೀಜಿಯವರು ಅಖಿಲ ಭಾರತವರ್ಷೀಯ ದಿಗಂಬರ ಜೈನ ಮಹಾಸಭೆಯ ಅಧ್ಯಕ್ಷ ಪೀಠವನ್ನೇರಿದ ಘನ ವಿದ್ವಾಂಸರು. ಅಂಥವರನ್ನು ತಮ್ಮ ಗ್ರಂಥದಿಂದ ಮೆಚ್ಚಿಸಿದವರು ಮಿರ್ಜಿ ಅಣ್ಣಾರಾಯರೆಂದು ಹೇಳಿದರೆ 'ಜೈನಧರ್ಮ' ಗ್ರಂಥದ ವಿಷಯಕ್ಕೆ ನಾವು ಹೆಚ್ಚಿಗೆ ಹೇಳಬೇಕಾಗುದಿಲ್ಲವಷ್ಟೆ.

ಅಣ್ಣಾರಾಯರ 'ಜೈನಧರ್ಮ'ವು ಈ ಕಾಲದ ಶಾಸ್ತ್ರಗ್ರಂಥವೆಂದು ಹೇಳಬೇಕಾಗುವದು. ಹಿಂದಿನ ಕಾಲದಲ್ಲಿ ಆಚಾರ್ಯರು—ಸಿದ್ಧಾಂತ ಚಕ್ರವರ್ತಿ ನೇಮಿಚಂದ್ರಾಚಾರ್ಯರು—ಆತ್ಮನ ವಿಷಯವನ್ನು ವಿವರಿಸಲಿಕ್ಕೆ

---

*ಸ್ವಸ್ತಿಶ್ರೀ ನೇಮಿಸಾಗರ ಸ್ವಾಮಿಗಳವರ "ಅಭಿನಂದನ ಗ್ರಂಥ" ಪುಟ ೫೧.

'ಗೊಮ್ಮಟಸಾರ'ದ 'ಜೀವಕಾಂಡ'ವನ್ನೂ ಕರ್ಮದ ವಿಷಯದ ವಿವರಣೆಗೆ 'ಕರ್ಮಕಾಂಡ'ವನ್ನೂ ರಚಿಸಿದರು. ಶ್ರೀಸಮಂತಭದ್ರಾಚಾರ್ಯರು 'ಶ್ರಾವಕಾಚಾರ'ವೆಂಬ ಆಚಾರಶಾಸ್ತ್ರವನ್ನು ನಿರ್ಮಿಸಿದರು. ಭಗವದ್ ಕುಂದಕುಂದಾಚಾರ್ಯರು "ಪಂಚಾಸ್ತಿಕಾಯ"ಗಳ ವಿಷಯವನ್ನೂ ಶುದ್ಧ ಅಧ್ಯಾತ್ಮ ವಿಷಯಗಳನ್ನು "ಸಮಯಸಾರ"ದಲ್ಲಿಯೂ ಪ್ರತಿಪಾದಿಸಿದರು. ಇವೆಲ್ಲ ಗ್ರಂಥಗಳ ಸಾರವಲ್ಲದೆ ಇನ್ನೂ ಎಷ್ಟೋ ಗ್ರಂಥಗಳ ಮಹತ್ವದ ವಿಷಯಗಳನ್ನೆಲ್ಲ ಕ್ರೋಢೀಕರಿಸಿ, ಅಣ್ಣಾರಾಯರು 'ಜೈನಧರ್ಮ'ದಲ್ಲಿ ಕೊಟ್ಟಿದ್ದಾರೆ. ಅದರಿಂದ ಇದು ಜೈನಶಾಸ್ತ್ರಗಳ ಸಾರವೆನಿಸುತ್ತದೆಂದು ಹೇಳಿದರೆ ಅತಿಶಯೋಕ್ತಿಯ ದೋಷ ನಮಗೆ ತಟ್ಟಲಾರದು. ಈ ಗ್ರಂಥದ ವಿಷಯದಲ್ಲಿ, ಸಿಂಹನಗದ್ದುಗೆ ಮಠದ ಶ್ರೀಮದಭಿನವ ಲಕ್ಷ್ಮಿಸೇನ ಭಟ್ಟಾರಕ ಪಟ್ಟಾಚಾರ್ಯವರ್ಯ ಸ್ವಾಮಿಗಳವರು ಅಭಿಪ್ರಾಯ ಪಟ್ಟಿದು ಹೀಗಿದೆ:—"ಮಿರ್ಜಿ ಅಣ್ಣಾರಾಯರಿಂದ ಬರೆಯಲ್ಪಟ್ಟ 'ಜೈನಧರ್ಮ'ವೆಂಬ ಗ್ರಂಥವು ಅತ್ಯುತ್ತಮ ಮತ್ತು ಬಹಳ ಉಪಯೋಗಕರವಾಗಿದೆ. ಇದನ್ನು ಎಲ್ಲರೂ ಸುಲಭವಾಗಿ ಓದಿ ತಿಳಿದುಕೊಳ್ಳಬಹುದು. ಈ ತರದ ಗ್ರಂಥವನ್ನು ಈ ವರೆಗೆ ಕನ್ನಡ ಮತ್ತು ತಮಿಳು ಭಾಷೆಗಳಲ್ಲಿ ಯಾರೂ ಬರೆಯಲಿಲ್ಲ. ಈ ಗ್ರಂಥದ ಪ್ರಕಟಣೆಯಿಂದ ಜೈನಸಮಾಜದವರಿಗೆ ಅತ್ಯುತ್ತಮ ಗೌರವ ಪ್ರಾಪ್ತವಾಗಿದೆ." ಇಂಥ ಹಲವು ಗ್ರಂಥಗಳನ್ನು ರಚಿಸುವ ಸಾಮರ್ಥ್ಯವನ್ನು ಅಣ್ಣಾರಾಯ ಮಿರ್ಜಿಯವರು ಹೊಂದಲೆಂದೂ ಅವರ ಆಯುರಾರೋಗ್ಯ ಗಳು ಹೆಚ್ಚಲೆಂದೂ ನಾವು ಆಶಿಸುತ್ತೇವೆ, ಆಶೀರ್ವದಿಸುತ್ತೇವೆ.

೩

## ಶ್ರೀ. ಜಿ. ಬ್ರಹ್ಮಪ್ಪ, ಎಂ. ಎ.

ಮಿರ್ಜಿಯವರು ಹಲವಾರು ಕಾದಂಬರಿಗಳನ್ನು ಕನ್ನಡ ವಾಚಕ ವೃಂದದ ಮುಂದಿಟ್ಟಿದ್ದಾರೆ. ಇದರಿಂದ ಉತ್ತಮ ಲೇಖಕರೆಂಬ ಹೆಸರನ್ನೂ ಗಳಿಸಿದರು. ಇವರು ಪ್ರತಿಭಾವಂತರು ಹೇಗೋ ಅಂತೆ ಪಾಂಡಿತ್ಯಭೂಷಣರೂ ಹೌದು. ಇವರ ಪಾಂಡಿತ್ಯಕ್ಕೆ ಹೊಯ್‌ಕೈಯಾಗಿ ಸಂಶೋಧಕ ಹಾಗೂ ವಿಚಾರಣೀಯ ಮನೋಭಾವವೂ ಇರುವುದರಿಂದ "ಜೈನಧರ್ಮ"ದಂತಹ ಬೃಹದ್‌ಗ್ರಂಥವೊಂದನ್ನು ರಚಿಸಲು ಸಾಧ್ಯವಾಯಿತು. ಇದುವರೆವಿಗೂ ವಿವಿಧ ವಿಷಯಗಳನ್ನೊಳಗೊಂಡು, ಸಂಶೋಧನಾತ್ಮಕ ಹೆಜ್ಜೆವಿಡಿದು, ಒಂದು ಸಹಸ್ರ ಪುಟದ ತನಕ ಬೆಳೆದು ಬೆಳಕಿಗೆ ಬಂದಿರುವ ಕನ್ನಡಗ್ರಂಥ 'ಜೈನಧರ್ಮ'ವನ್ನುಳಿದರೆ ಮತ್ತಾವುದೂ ಇಲ್ಲ. ಆರ್. ನರಸಿಂಹಾಚಾರ್ಯರ ಕವಿಚರಿತ್ರೆ ಗಾತ್ರದಲ್ಲಿ ಇದಕ್ಕೆ ಸಮನಾದರೂ ಅದರ ಗುರಿ ಏಕಮುಖವಾದ್ದು. ಕವಿ-ಕಾವ್ಯ ವಿಮರ್ಶೆಯೇ ಅದರ ಧ್ಯೇಯ.

ಕನ್ನಡದಲ್ಲಿ ಸಂಶೋಧನಾ ಗ್ರಂಥಗಳು ಅತಿವಿರಳ. ನಮ್ಮ ಪೂರ್ವಿಕರೆಲ್ಲ ಸಂಸ್ಕೃತವನ್ನು ಓದಿ ತೃಪ್ತಿಪಟ್ಟುಕೊಂಡವರು. ಇಂದಿನವರು ಇಂಗ್ಲೀಷನ್ನು ಓದಿ ಆನಂದಪಡುವವರು. ಹೀಗಾಗಿ ಕನ್ನಡ ಶಾಸ್ತ್ರ ಸಾಹಿತ್ಯ ಬಡವಾಯಿತು. ಜೈನಧರ್ಮ ಕನ್ನಡನಾಡಿನಲ್ಲಿ ಸಹಸ್ರಾರು ವರ್ಷದಿಂದ ಬಾಳಿದ್ದರೂ ಕನ್ನಡ ಸಂಸ್ಕೃತಿಯೇ ಜೈನ ಸಂಸ್ಕೃತಿಯಾಗಿದ್ದಂತಹ ಸುವರ್ಣಯುಗವನ್ನು ಕಂಡಿದ್ದರೂ ತಿಳಿಗನ್ನಡದಲ್ಲಿ ತನ್ನ ಮರ್ಮವನ್ನು ಕನ್ನಡಿಗರಿಗೆ ಮೈದೋರಿದುದು ಅಪರೂಪ. ಮಿರ್ಜಿಯವರು ಇಂದು ಜೈನಧರ್ಮವನ್ನು ಸುಲಲಿತ ಸಹಜ ಸುಂದರ ಭಾಷೆಯಲ್ಲಿ ವಿವರಿಸಿ ಕನ್ನಡಿಗರಿಗೆ ಮಹದುಪಕಾರ ಮಾಡಿದ್ದಾರೆ.

ಇಡೀ ಜೈನಧರ್ಮ, ಜೈನಸಂಸ್ಕೃತಿ, ಜೈನಸಾಹಿತ್ಯ, ಜೈನಶಿಲ್ಪ ಈ ನಾಲ್ಕೊಗವನ್ನು ಒಟ್ಟಿಗೆ ಒಂದೆಡೆ ಕ್ರೋಢೀಕರಿಸಿದ ಕೀರ್ತಿ ಮಿರ್ಜಿಯವರಿಗೆ ಮೀಸಲು. ಮಿರ್ಜಿಯವರ ಗುರಿ ಪಂಡಿತಪಾಮರರಿಬ್ಬರಿಗೂ ರುಚಿಸಲೆಂದು ಜೈನಧರ್ಮದ ಇತಿಹಾಸವನ್ನು ಸಂಶೋಧನೆಯ ಬೆಳಕಿನಲ್ಲಿ ಇವರು ಹುಡುಕಿದ್ದಾರೆ. ಉಪಲಬ್ಧವಾಗಿದ್ದ ಜೈನಸಾಹಿತ್ಯ ಶರಧಿಯಲ್ಲಿ ಮುಳುಗಿ ಅಪೂರ್ವ

ರತ್ನಗಳನ್ನು ಹೊರತೆಗೆದಿದ್ದಾರೆ. ಬಹುಜನ ವಿದ್ವಾಂಸರು ಜೈನಧರ್ಮಕ್ಕೆ ಮಹಾವೀರನೇ ಮೂಲಪುರುಷನೆಂದು ಭ್ರಮಿಸಿದ್ದರು. ಮಿರ್ಜಿಯವರು ಜೈನೇತರ ಗ್ರಂಥಗಳಿಂದ ಉಲ್ಲೇಖಗಳನ್ನು ಹೊರಸೆಳೆದು ಜೈನಧರ್ಮದ ಅನೂಚಾನ ಪರಂಪರೆಯನ್ನು ಪ್ರತಿಪಾದಿಸಿರುವರು. 'ಶ್ರೀಮದ್‌ಭಾಗವತ' ೨-೬ ಅಧ್ಯಾಯಗಳಲ್ಲಿ ನಾಭಿ ಮರುದೇವಿಯರ ಮದುವೆಯ ವಿಷಯ ಬಂದಿದೆ. ಇವರಿಬ್ಬರ ಮಗನೇ ವೃಷಭದೇವನೆಂದೂ ಆತನಿಗೆ ನೂರು ಜನ ಮಕ್ಕಳೆಂದೂ ಹಿರಿಯ ಮಗ ಭರತನೆಂದೂ ತಿಳಿಸಿ, ಕೊನೆಗೆ ವೃಷಭದೇವ ಸನ್ಯಾಸಿಯಾಗಿ ನಗ್ನರೂಪದಲ್ಲಿ ವಿಹರಿಸಿದನೆಂದೂ ಭಾಗವತದಲ್ಲಿದೆ. ಇದರಿಂದ ಜೈನಧರ್ಮ ಮತ್ತು ನಗ್ನಯತಿಗಳ ಪರಂಪರೆ ವೃಷಭನಿಂದ ಪ್ರಾರಂಭ ವಾಯಿತು. ಮಿರ್ಜಿಯವರು ಪಾಶ್ಚಿಮಾತ್ಯ ಪರಿಶೋಧಕರ ಅಭಿಪ್ರಾಯ ಗಳನ್ನು ಕ್ರೋಢೀಕರಿಸಿ ವಿಮರ್ಶಿಸಿದ್ದಾರೆ. ಡಾ. ಯಾಕೊಬಿ ಮತ್ತು ಸರ್ ರಾಧಾಕೃಷ್ಣನ್‌ರವರು ಜೈನಧರ್ಮ ವೃಷಭದೇವನ ಕಾಲದಿಂದ ನಡೆದು ಬರುತ್ತಿದೆಯೆಂದು ಒಪ್ಪಿಕೊಂಡಿದ್ದಾರೆ.

ಮಿರ್ಜಿ ಅಣ್ಣಾರಾಯರು ಯಾವ ಯಾವ ಭಾಷೆಗಳಲ್ಲಿಯೋ ಇದ್ದ ಪರಿಶೋಧನ ಪ್ರಸಂಗಗಳನ್ನೆಲ್ಲ ಒಂದೆಡೆಗೆ ಕನ್ನಡದಲ್ಲಿ ಕ್ರೋಢೀಕರಿಸಿ ಕನ್ನಡಿಗರ ಗಮನವನ್ನು ಸೆಳೆದಿದ್ದಾರೆ.

ಈ ಗ್ರಂಥದಲ್ಲಿ ವೃಷಭನಿಂದ ವರ್ಧಮಾನನ ತನಕ ಇರುವ ಇಪ್ಪತ್ತು ನಾಲ್ಕು ಜನ ತೀರ್ಥಂಕರರ ಜೀವನಚಿತ್ರವನ್ನು ಸ್ಥೂಲವಾಗಿ ಕೊಟ್ಟಿದ್ದಾರೆ. ಮಹಾವೀರನಾದ ಮೇಲೆ ಜೈನಸಂಘ ಒಡೆದು, ನಾನಾ ಪಂಥಗಳಾದುದನ್ನು ವಿಮರ್ಶಿಸಿದ್ದಾರೆ. ಇವುಗಳಲ್ಲಿ ದಿಗಂಬರ, ಶ್ವೇತಾಂಬರ, ಸ್ಥಾನಕವಾಸಿ ಇವು ಪ್ರಮುಖ ಪಂಥಗಳು.

ಹಿಂದೂಸ್ಥಾನದ ಎಲ್ಲ ಭಾಷೆಗಳಲ್ಲಿಯೂ ರಚಿತವಾಗಿರುವ ಜೈನಶಾಸ್ತ್ರ, ಸಾಹಿತ್ಯಗ್ರಂಥಗಳ ವಿವರವನ್ನು ಮಿರ್ಜಿಯವರು ಒಂದೆಡೆ ಕೂಡಿಸಿ, ಜೈನ ಧರ್ಮದ ವ್ಯಾಪ್ತಿಯನ್ನು ಅಳೆದು ನೋಡಿಸಿದ್ದಾರೆ. ಜೈನಧರ್ಮಕ್ಕೆ ಆಕರ್ಷಿತರಾದ ರಾಜವಂಶಗಳ ಚಿತ್ರಗಳನ್ನೂ ಕೊಟ್ಟು, ಕ್ಷಾತ್ರಫಣಿ ಅಹಿಂಸೆಯ ಮಣಿಯನ್ನು ತಳೆದು ರಾರಾಜಿಸಿದ ಸಂದರ್ಭಗಳನ್ನು ಹೃದಯಂಗಮವಾಗಿ ವಿಮರ್ಶಿಸಿದ್ದಾರೆ.

ನೃಪತುಂಗನ ಕಾಲದಲ್ಲಿ ಇದ್ದ ವೀರಸೇನ, ಜಿನಸೇನ ಇವರಿಂದ ರಚಿತವಾದ ಧವಳಗ್ರಂಥಗಳನ್ನು ಮಿರ್ಜಿಯವರು ಅವಲೋಕಿಸಿ, ಜೈನ

ಧರ್ಮದ ಶಾಸ್ತ್ರೀಯ ಭಾಗವನ್ನು ನವನೂತನ ದೃಷ್ಟಿಯಿಂದ ವಿವೇಚಿಸಿದ್ದಾರೆ. ಜೈನಧರ್ಮವನ್ನು ಉಳಿದ ಧರ್ಮಗಳೊಡನೆ ಹೋಲಿಸಿ ಕನ್ನಡದಲ್ಲಿ ವಿಮರ್ಶಿಸಿದವರಲ್ಲಿ ಮೊದಲಿಗರು ಮಿರ್ಜಿ ಅಣ್ಣಾರಾಯರು. ಈ ವಿಮರ್ಶೆಯಲ್ಲಿ ಹಲವಾರು ವಿಷಯಗಳನ್ನು ಒಪ್ಪದವರುಂಟು; ಅಂದಮಾತ್ರಕ್ಕೆ ಮಿರ್ಜಿಯವರ ಘನತೆ ಕುಂದಲಾರದು. ತಮ್ಮ ವಿಚಾರಧೋರಣೆಯನ್ನು ಕೆಚ್ಚೆದೆಯಿಂದ ಕನ್ನಡಿಗರ ಮುಂದಿಟ್ಟಿದ್ದಾರೆ.

ಜೈನ ತೀರ್ಥಕ್ಷೇತ್ರಗಳನ್ನು ಪ್ರತ್ಯಕ್ಷವಾಗಿ ಕಂಡು, ಅಲ್ಲಿನ ಮಹಿಮೆಯನ್ನು ಅನುಭವಿಸಿ, ಈ ಲೇಖಕರು ನಾನಾ ತೀರ್ಥಕ್ಷೇತ್ರಗಳ ಪರಿಚಯವನ್ನು ಗ್ರಂಥದಲ್ಲಿ ಉಲ್ಲೇಖಿಸಿರುವರು. ನಾನಾ ಪ್ರಾಂತಗಳಲ್ಲಿ ಜೈನಧರ್ಮ ವಿಕಾಸಗೊಂಡುದನ್ನು ಅವಲೋಕಿಸಿರುವರು. ಇವರ ಈ ಗ್ರಂಥ ಕೇವಲ ಶಾಸ್ತ್ರವಲ್ಲ. ಶಾಸ್ತ್ರದ ಜೊತೆಗೆ ಜೈನಕಾವ್ಯಗಳ ಕಮನೀಯ ಕಂಪು ಇದರಲ್ಲಿ ವ್ಯಾಪಿಸಿದೆ. ಜೈನಶಿಲ್ಪದ ನಯನಮನೋಹರ ಮಹಿಮೆಯೂ ಇದರಲ್ಲಿ ತುಂಬಿದೆ. ಜೈನಶಾಸ್ತ್ರದ ಕಾಠಿಣ್ಯದೊಡನೆ ಜೈನ ಅಹಿಂಸೆಯ ಮಾಧುರ್ಯವೂ ಬೆರೆತು ಈ ಗ್ರಂಥ ಕನ್ನಡದಲ್ಲಿ ಅನುಪಮ ಸಾಹಿತ್ಯರತ್ನವಾಗಿದೆ. ಪೂರ್ವೇತಿಹಾಸದಿಂದ ಹಿಡಿದು, ಮೊನ್ನೆಮೊನ್ನೆಯ ತನಕ ಆಗಿರುವ ಜೈನ ಪರಂಪರೆಯ ವಿಕಾಸವನ್ನು ನಿರಾಯಾಸವಾಗಿ ಈ ಗ್ರಂಥದ ನೆರವಿನಿಂದ ಯಾರು ಬೇಕಾದರೂ ಅರಿಯಬಹುದು. "ಇದರಲ್ಲಿ ಏನಿದೆ?" ಎಂದು ಕೇಳಿದವರಿಗೆ "ಏನು ತಾನೆ ಇಲ್ಲ," ಎನ್ನುವುದೇ ನನ್ನ ಉತ್ತರ.

# "ಲೇಖನಕಲೆ"ಯೊಂದು ಅಭ್ಯಾಸ ದರ್ಪಣ

ಶ್ರೀ. ಎನ್. ಎಸ್. ಗದಗಕರ, ಬಿ. ಎ. ಧಾರವಾಡ.

'ಜಯಕರ್ನಾಟಕ'ದಲ್ಲಿ ಶ್ರೀಮಾನ್ ಚೆನ್ನವೀರ ಕಣವಿ ಎಂ. ಎ. ಇವರು ಮಿರ್ಜಿ ಅಣ್ಣಾರಾಯರ 'ಲೇಖನಕಲೆ'ಯು '**ಹೊಸ ಬರಹಗಾರರಿಗೊಂದು ಕೈಪಿಡಿ**'ಯಾಗಿದೆಯೆಂದು ಹೇಳಿ, "ಇದು ಕನ್ನಡದಲ್ಲಿ ಬರೆಯಬೇಕೆನ್ನುವ ವಿದ್ಯಾರ್ಥಿಗಳಿಗೆ ಲೇಖನಕಲೆಯ ತಂತ್ರವನ್ನು ವಿವರಿಸುವ, ಒಂದು ಪದ್ಧತಿ, ಕ್ರಮ, ನಿಯಮಕ್ಕನುಸಾರವಾಗಿ ಬರೆಯಲ್ಪಟ್ಟ ಗ್ರಂಥ 'ಲೇಖನಕಲೆ' ಬರೀ ಹೊಸಬರಷ್ಟೇ ಅಲ್ಲ, 'ಸಾಹಿತಿ' ಎನಿಸಿಕೊಂಡವರೂ ಇದನ್ನು ಒಮ್ಮೆ ಓದಿನೋಡಬೇಕು"* ಎಂದು ಹೇಳಿದ್ದಾರೆ. ಹೊಸಗನ್ನಡದಲ್ಲಿ ಈ ಮಾದರಿಯ ಗ್ರಂಥ ಇದೇ ಮೊದಲನೆಯದೆಂದು ಹೇಳಲಾಗುವದು. ಇಲ್ಲಿ ಶ್ರೀಮಾನ್ ಎನ್. ಎಸ್. ಗದಗಕರರು 'ಲೇಖನಕಲೆ'ಯನ್ನು ವಿಮರ್ಶಿಸಿದ್ದಾರೆ.

ಒಳಪಿಡಿಯಲ್ಲಿ ವಿವೇಚಿಸಿದಂತೆ ಇಲ್ಲಿ ಇಪ್ಪತ್ತೊಂದು ವಿಷಯಗಳು ಅಡಕವಾಗಿವೆ. ಮೊದಲನೆಯದಾದ 'ಲೇಖನಕಲೆ'ಯ ಪ್ರಕರಣವು ಪ್ರಸ್ತುತ ಗ್ರಂಥಕ್ಕೆ ತಲೆಬರೆಹವಾಗಿ ಪರಿಣಮಿಸಿದೆ. ಕನ್ನಡದಲ್ಲಿ ಈ ಬಗೆಯ ಆಧಾರ ಗ್ರಂಥಗಳು ಅಪರೂಪವಾಗಿ ಕಣ್ಣಿಗೆ ಬಿದ್ದರೂ ಆಂಗ್ಲಭಾಷೆಯಲ್ಲಿ ಏ. ಟಿ. ಕ್ವಿಲರಕೂಚ್ ಎಂಬ ಪ್ರತಿಭಾವಂತ ಲೇಖಕನ The Art of Reading, The Art of Writing ಎಂಬ ಸರ್ವಮಾನ್ಯವಾದ ಗ್ರಂಥಗಳಂತಹವು ಇವೆ. ಅವುಗಳನ್ನೋದಿದವರಿಗೆ ತಂತ್ರಗ್ರಂಥ ಬರೆಯುವವರ ಯೋಗ್ಯತೆ ಎಂತಹದಿರಬೇಕೆಂಬುದು ಸ್ಪಷ್ಟವಾಗದಿರದು. ಮಿರ್ಜಿಯವರ ಈ ಗ್ರಂಥವಾದರೂ ಆ ಮಾದರಿಯ ಗ್ರಂಥಗಳ ಮಾಲಿಕೆಗೆ ಸೇರಬೇಕು.

ಲೇಖನ ಒಂದು ಕಲೆ. ಅದಕ್ಕೆ ಸ್ಫೂರ್ತಿ ಒಂದು ಅಂಶವೆಂದು ಹೇಳುತ್ತ ಲೇಖಕರು ಶಬ್ದರಚನೆ, ಅಲಂಕಾರ, ಶೈಲಿಯನ್ನು ಕಡೆಗಣಿಸಲಾಗದೆಂದು ಹೊಸ ಲೇಖಕರಿಗೆ ಪ್ರಾರಂಭಕ್ಕೇ ಎಚ್ಚರಕೊಡುವರು. ಏನು ಗೊತ್ತಿದ್ದರೂ ಅನುಭವಗಳ ಆಯ್ಕೆಗೆ ಮಹತ್ತ್ವದ ಸ್ಥಾನವಿದೆಯೆಂದು ಮಂಡಿಸುವಾಗ 'ಅಶಾಂತಿಪರ್ವ'ದ ಪಾತ್ರಪರಿಪೋಷಣೆಯ ರೀತಿ ಬಂದಿರುವುದು.

'ಸಾಮಾನ್ಯಸ್ವರೂಪ'ವೆಂಬ ಭಾಗದಲ್ಲಿ ಶುದ್ಧ ಬರೆಹದ ಊಹಾಪೋಹವಿದೆ. ಗ್ರಾಮ್ಯಶಬ್ದಗಳಿಗೂ ಅಶುದ್ಧ ಪ್ರಯೋಗಗಳಿಗೂ ಸ್ಥಾನವಿರಬಾರ

---

*ಜಯಕರ್ನಾಟಕ, ನವ್ಹಂಬರ ೧೯೪೭

ದೆಂದಾಗ ಯಾರೂ ಒಪ್ಪುವರು. 'ಸಮುಚಿತ ಶೈಲಿ' ಎಂದರೆ ಅಲಂಕಾರದ್ದಲ್ಲ; ಆದರೆ ಸಮರ್ಪಕವಾದುದು ಅಥವಾ ಕೊರತೆಯಿಲ್ಲದ್ದು ಎಂದು ಗ್ರಂಥಕಾರರು ಅರ್ಥ ಹೇಳುವರು. 'ಲೆಕ್ಕಣಿಕೆ ಹಿಡಿಯುವಾಗ ಎಲ್ಲಕ್ಕೂ ಮೊದಲು ವಿಚಾರದ ಸ್ಪಷ್ಟತೆ ಬೇಕು. ಮುಖ್ಯವಾಗಿ ಹೋರಾಟವಿಲ್ಲದಿದ್ದರೆ ಕಲಾಕೃತಿ ಸಪ್ಪೆಯಾಗುವುದು. 'ಕಥನಕಲೆ'ಯ ವಿಭಾಗದಲ್ಲಿ—ಕುತೂಹಲ ಹುಟ್ಟಿಸಿ ಕೊನೆಯವರೆಗೂ ಒಯ್ಯುವ ಸಾಮರ್ಥ್ಯ ಅವಶ್ಯವೆಂದು ಹೇಳಿದೆ. ಅಲ್ಲದೆ ಜಿಜ್ಞಾಸೆ, ಉತ್ಕಟತೆ, ವಿಸ್ಮಯ ಈ ಮೂರು ಭಾವನೆಗಳ ಮೇಲೆ ಕಥಾನಕವಿರ ಬೇಕೆಂಬುದು ನಿಜ.

ನಾಟಕದ ಪ್ರಶ್ನೆ ಹೊರಟಾಗ ಅದರ ಪಾತ್ರರಚನೆಯಲ್ಲಿ ಹೊಸತನವಿರ ಬೇಕು ಎಂದು ಲೇಖಕರ ಮತ. ಅದಕ್ಕೆ ಶ್ರೀರಂಗರ 'ಮನೆಯಲ್ಲಿ ಮಹಾ ಸಭೆ'ಯ ಉದಾಹರಣೆ ಉಂಟು. ಅಲ್ಲಲ್ಲಿ ಸ್ವಗತ ಭಾಷಣಗಳಿದ್ದರೆ—ಕಂಪನಿ ನಾಟಕದಂತೆ—ರಸಭಾವ ತಳೆಯಲು ಓದುಗರಿಗೆ ಶಕ್ಯವಿಲ್ಲ.

ಇನ್ನು ಕಾದಂಬರಿಯ ವಿಷಯ. ಅದರ ಮುಖ್ಯ ಲಕ್ಷಣವೆಂದರೆ ಓದಲಿಕ್ಕೆ ಪ್ರಾರಂಭಿಸಿದರೆ ಕೊನೆಯ ವರೆಗೂ ಕೆಳಗಿಡದಂತಾಗಬೇಕೆಂಬುದು. ಅಲ್ಲಿ ಪಾತ್ರ-ಪ್ರಸಂಗಗಳು ಪ್ರಮಾಣಬದ್ಧವಿದ್ದು ಸ್ಫುಟವಾಗಿರಬೇಕು. ಶೈಲಿ ಸರಳವಾಗಿರಬೇಕು. ಇದಕ್ಕೆ ಉದಾಹರಣೆಗಳೆಂದು ಕನ್ನಡ, ಮರಾಠಿ ಸಾಹಿತ್ಯಗಳಿಂದ ಮಿರ್ಜಿಯವರು ಸನ್ನಿವೇಶಗಳನ್ನು ಆಯ್ದು ತೋರಿಸಿದ್ದಾರೆ. ಪ್ರಕರಣದ ಪ್ರಾರಂಭದ ರೀತಿಗಳೂ ಇವೆ ಈ ಗ್ರಂಥದಲ್ಲಿ.

ಸಣ್ಣ ಕತೆಯ ಲಕ್ಷಣಗಳನ್ನು ಗ್ರಂಥಕಾರರು ಪ್ರಸಿದ್ಧ ಕತೆಗಾರರ ಕೃತಿ ಗಳ ಮುಖಾಂತರ ಮಂಡಿಸಿದ್ದಾರೆ. ಸುಂದರ ಆರಂಭ, ಪ್ರಧಾನ ರಸಪುಷ್ಟಿ, ಒಳ್ಳೇ ಸಂಸ್ಕಾರಮಾಡುವಿಕೆ, ಹೋರಾಟದ ಪ್ರಖರತೆ, ಸಂಪೂರ್ಣತೆ— ಹೀಗೆ ಕೆಲವು ಗುಣಗಳನ್ನು ಈ ಪ್ರಕರಣದಲ್ಲಿ ವಿವೇಚಿಸಲಾಗಿದೆ. ದೊಡ್ಡ ನಾಟಕದ ಮಾತು ಬಂದಾಗ—ಜೀವಂತ ಪಾತ್ರ, ಚುರುಕಾದ ಸಂವಾದ, ಸಮಾಜದ ಜ್ಞಾನ, ಪ್ರತಿ ಅಂಕಿನ ಕಲಾಪೂರ್ಣ ಹೆಣಿಕೆ—ಅವಶ್ಯ ಎಂದು ಲೇಖಕರು ವಿವರಿಸುವರು. ಕೊನೆಯ ಪ್ರಕರಣಗಳಲ್ಲಿ ಪ್ರಬಂಧ ಭಾವ ಗೀತೆಯ ಲಕ್ಷಣಗಳ ಚರ್ಚೆ ಇದೆ.

ವ್ಯಕ್ತಿತ್ವ ಮೂಡಿಸುವುದೇ ಪ್ರಬಂಧದ ಹಿರಿಗುರಿ. ಛಂದೋ-ನಿಯಮ ಗಳೊಡನೆ ಭಾವಗೀತೆ ಹೃದಯೋದ್ರೇಕ ಉಂಟುಮಾಡಬೇಕು. ಸಂಕ್ಷೇಪತೆ, ಸರಳತೆ ಇದ್ದೇ ಇವೆ.

'ವಿಮರ್ಶಕನಾರು?' ಎಂಬಲ್ಲಿ ಅವನು ಕಲೋಪಾಸಕ, ಆದರೆ ವಿಶೇಷ ದೃಷ್ಟಿ ಇದ್ದವ—ಎಂದು ಗ್ರಂಥಕಾರರ ಅಭಿಪ್ರಾಯ. 'The critic of poetry is a poet but not a very good one' ಎಂಬ ಆಂಗ್ಲನುಡಿ ಇದೇ ಮಾತನ್ನು ಎಷ್ಟೋ ಮಟ್ಟಿಗೆ ಎತ್ತಿಹಿಡಿಯುವುದು.

ಅನುಬಂಧ, ಆಧಾರ ಸಾಹಿತ್ಯಗ್ರಂಥಗಳನ್ನು ನೋಡಲಾಗಿ 'ಲೇಖನ ಕಲೆ' ಬರೆಯುವಲ್ಲಿ ಗ್ರಂಥಕಾರರು ಎಷ್ಟು ತಾಳ್ಮೆವಹಿಸಿ, ಅಭ್ಯಾಸಬಲ ಮುಂದೆಮಾಡಿ ಕಾರ್ಯನಿರ್ವಹಿಸಿರುವರೆಂಬುದು ಎಲ್ಲರಿಗೂ ಹೊಳೆಯುವುದು. ಹೊಸ ಲೇಖಕರಿಗೆ **ಅಭ್ಯಾಸದರ್ಪಣ**ವೆಂಬ ದೃಷ್ಟಿಯಿಂದ ಈ ಹೊತ್ತಗೆ ಅತ್ಯುಪಯುಕ್ತ ಸಾಹಿತ್ಯತಂತ್ರದ ಪರಿಚಯ ಮಾಡಿಕೊಟ್ಟಿತು. ನಿಶ್ಚಿತವಾಗಿ ಲಕ್ಷಣಗಳನ್ನು ವಿವರಿಸುವಾಗ ಮಿರ್ಜಿಯವರು ಬಹಳ ಜಾಗರೂಕರಾಗಿ ತಮ್ಮ ವಿದ್ವತ್ತೆಯನ್ನು ತೋರ್ಪಡಿಸಿರುವರು. ವಿವಿಧ ಗ್ರಂಥಕಾರರ ಕಲಾಕೃತಿಗಳಿಂದ ಸನ್ನಿವೇಶಗಳನ್ನು ಉದಾಹರಿಸುವಾಗಲೂ ಲೇಖಕರ ಜಾಣ್ಮೆ, ರಸಿಕತೆ ವ್ಯಕ್ತವಾಗಿವೆ. ವಿಷಯನಿರೂಪಣೆಯ ಶೈಲಿ ಉಚಿತವಾಗಿದೆ. ತಂತ್ರಗ್ರಂಥವಾದರೂ ಸ್ಪಷ್ಟತೆ ಕಾಣುವುದು.

ಲೇಖಕರಿಗೆ ಇಷ್ಟೊಂದು ಬಹುಮುಖಜ್ಞಾನವಿದ್ದರೂ ಇಂತಹ ಗ್ರಂಥದಲ್ಲಿ ಕೆಲವು ಕುಂದುಕೊರತೆಗಳು ಕಾಣಬರುವುದು ಸಹಜ. ಭಾವಗೀತೆ, ಪ್ರಬಂಧ, ಸಣ್ಣ ಕತೆ, ವಿಮರ್ಶೆಯ ಲಕ್ಷಣಗಳು ಇಲ್ಲಿ ವಿವೇಚಿಸಲಾದುವಕ್ಕಿಂತಲೂ ಹೆಚ್ಚಾಗಿವೆ. ಪಾರಿಭಾಷೆಗಳಿಂದ ಇನ್ನೂ ಸಹಾಯ ಬಳಸುವದಗತ್ಯವಿತ್ತು. ಅಂತೇ ವಿಷಯ ತುಂಬಿಬಂದಿಲ್ಲವೆನಿಸುವುದು. ಅಲ್ಲದೆ ಸಾಮಾನ್ಯರಿಗೆ ಅತಿಕಷ್ಟವೆನಿಸಬಹುದಾದ ಮೂರು ನಾಲ್ಕು ಪ್ರಕರಣಗಳನ್ನು ಲೇಖಕರು ಬಿಡಬಹುದಾಗಿತ್ತು. ಸಾಹಿತ್ಯ ನಿರ್ಮಾಪಕರಿಗೆ ಇಲ್ಲಿಯ ಸೂಚನೆಗಳು ಸಾಧುವಿದ್ದರೂ ಮೈಗೂಡಿಸಿಕೊಳ್ಳಲು ಕಠಿಣ. ಅಂತೇ ಕೊಂಚ ನಿರಾಶೆ. ಈ ಮಾತು ಎಲ್ಲಾ ಲಕ್ಷಣಗ್ರಂಥಗಳಿಗೆ ಅನ್ವಯಿಸುವುದು.

'ಲೇಖನಕಲೆ' ಮಿರ್ಜಿಯವರ ಹೊಸಮಾದರಿಯ ಕೃತಿ. ಅಲ್ಲಿ ಹೀಗೆ ಒಂದೆರಡು ದೋಷಗಳು ಕಂಡರೂ ಅವು ಈ ಹೊತ್ತಗೆಯ ಬೆಲೆಯನ್ನು ಕಡೆಗಣಿಸಲಾರವು. ತಂತ್ರಗ್ರಂಥಕ್ಕೆ ಎಂದೂ ವಿಶಿಷ್ಟ ಸ್ಥಾನ, ಮಾನ ಇದ್ದೇ ಇವೆ. ಸಾಹಿತ್ಯಪ್ರೇಮಿಗಳೆಲ್ಲರೂ ಈ ಗ್ರಂಥವನ್ನು ಆಸ್ಥೆಯಿಂದ ಸಂಗ್ರಹಿಸಿ ಓದಬೇಕೆಂದು ಕೊನೆಗೆ ಹೇಳಬಹುದು.

# ಅನುಭವಿಕ ಶಿಕ್ಷಕರ ಶೈಕ್ಷಣಿಕ ಗ್ರಂಥ

ಪ್ರಿ. ಎಸ್. ಡಿ. ಇಂಚಲ, ಬಿ. ಎ., ಬಿ. ಟಿ., ಹುಬ್ಬಳ್ಳಿ.

ಮಿರ್ಜಿ ಅಣ್ಣಾರಾಯರು ಹದಿನೆಂಟು ವರ್ಷಗಳಿಂದ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರೆಂದು ಸೇವೆಸಲ್ಲಿಸುತ್ತ ಬಂದರು. ಇವರು ಧಾರವಾಡ ಟ್ರೇನಿಂಗ ಕಾಲೇಜಿನ ವಿದ್ಯಾರ್ಥಿಗಳಾಗಿರುವಾಗಲೇ ಒಳ್ಳೆಯ ಶಿಕ್ಷಕರೆಂದು ಖ್ಯಾತಿಯನ್ನು ಪಡೆದರು. ಶಿಕ್ಷಕವಿದ್ಯಾರ್ಥಿಗಳಾಗಿರುವಾಗಲೇ ಪ್ರಿನ್ಸಿಪಾಲರಿಂದಲೂ ಪ್ರಾಧ್ಯಾಪಕರಿಂದಲೂ ಸತ್ಕಾರದ ಮೆಚ್ಚುಗೆಯನ್ನು ಹೊಂದಿದರು.* ಮೊನ್ನೆ ಮೊನ್ನೆ ಕರ್ನಾಟಕದ ಮಿಂಚುತ್ತಿರುವ ಶಿಕ್ಷಕರಲ್ಲಿ ಮೊದಲಿಗರೆಂದು ಇವರ ಪರಿಚಯವನ್ನು 'ಪ್ರಾಥಮಿಕ ಶಿಕ್ಷಣ'ವೆಂಬ ಮಾಸಪತ್ರಿಕೆಯು ಕನ್ನಡಲೋಕಕ್ಕೆ ಮಾಡಿಕೊಟ್ಟು ತನ್ನ ಗುಣಗ್ರಾಹಕತೆಯನ್ನು ವ್ಯಕ್ತಪಡಿಸಿತು.† ಇವರ 'ಮೂಲಶಿಕ್ಷಣದ ಮೌಲ್ಯಮಾಪಣ' ಎಂಬ ಗ್ರಂಥವನ್ನು ವಿಮರ್ಶಿಸುತ್ತ ಧಾರವಾಡ ಸರಕಾರೀ ಟ್ರೇನಿಂಗ ಕಾಲೇಜಿನ ಪ್ರಿನ್ಸಿಪಾಲರು "ಮಿರ್ಜಿ ಅಣ್ಣಾರಾಯರ ಪಳಗಿದ ಕೈಯಿಂದ ಹೊರಬಂದ ಈ ಚಿಕ್ಕ ಪುಸ್ತಕವು ಅವರ ಶೈಕ್ಷಣಿಕ ಅನುಭವದ ಆಳವನ್ನೂ ಒಳಗೊಂಡಿದೆ.‡" ಎಂದು ನುಡಿದಿದ್ದಾರೆ. ಅದರಂತೆ ಪದವೀಧರ ಜೀವನ ಶಿಕ್ಷಣ ಕೇಂದ್ರ (ಧಾರವಾಡ)ದ ಪ್ರಿನ್ಸಿಪಾಲರಾದ ಮ. ಗು. ಹಂದ್ರಾಳರವರೂ ಈ ಗ್ರಂಥದ ವಿವರಣೆಯಲ್ಲಿ "ಲೇಖಕರ ಅನುಭವ ತುಂಬಿಬಂದಿದೆ" ಎನ್ನುವರು. ಉಚ್ಚ ಶಿಕ್ಷಣಾಧಿಕಾರಿಗಳಾದಂಥ ಶ್ರೀ. ಸಿ. ವಿ. ಜೇವುರ ಬಿ. ಎ. (ಆನರ್ಸ), ಎಂ ಈ. ಡಿ. ಇವರಂತೂ ಮುನ್ನುಡಿಯಲ್ಲಿ ಅಣ್ಣಾರಾಯರ ವಿಷಯಕ್ಕೆ ಹೇಳುತ್ತ "ಪ್ರಾಥಮಿಕ ಶಾಲೆಯಲ್ಲಿ ಇವರು ಸ್ವತಃ ಗುರೂಜಿಯವರಿದ್ದು, ಈ ಹೊಸ ಪದ್ಧತಿಯ ಶಿಕ್ಷಣವನ್ನು ಕೊಟ್ಟು, ಅದರ ಬಗ್ಗೆ ಪೂರ್ಣ ವಿಚಾರಮಾಡಿದವರಿದ್ದಾರೆ."

---

* 'ಪ್ರಾಥಮಿಕ ಶಿಕ್ಷಣ' ಮಾಸಪತ್ರಿಕೆ ಜಾನೆವರಿ ೧೯೪೭.

† ,, ,, ,, ಜುಲೈ ೧೯೫೪.

‡ ,, ,, ,, ಸಪ್ಟಂಬರ ೧೯೫೪.

ಎಂದು ಹೇಳಿದ್ದಾರೆ. ಇಂಥ ಶೈಕ್ಷಣಿಕ ಅನುಭವದ ಸದ್‌ವಿನಿಯೋಗ-ವೆಂದು ಇತ್ತೀಚೆಗೆ ಇವರು 'ಭಾಷಾ ಶಿಕ್ಷಣ'ವೆಂಬ ಗ್ರಂಥವೊಂದನ್ನೂ ಬರೆದು ಪ್ರಕಟಿಸಿದ್ದಾರೆ. ಇದರಲ್ಲಿ ಭಾಷಾ ಶಿಕ್ಷಣದ ತತ್ವ, ಅಭ್ಯಾಸ ಪತ್ರಿಕೆ, ಕಲಿಸುವ ಕ್ರಮಗಳನ್ನೆಲ್ಲ ಸಂಗ್ರಹರೂಪದಲ್ಲಿ ಮಂಡಿಸಿದ್ದಾರೆ. ಜೊತೆಗೆ ಚಟುವಟಿಕೆಯ ಹಿನ್ನೆಲೆಯುಳ್ಳ, ಭಾಷಾವಿಷಯದ ಪಾಠಗಳನ್ನು ಹೇಗೆ ಕಲಿಸಬೇಕೆಂಬುದನ್ನೂ ವಿವೇಚಿಸಿದ್ದಾರೆ. ಇವರ 'ಮೂಲಶಿಕ್ಷಣ ಮೌಲ್ಯಮಾಪಣ'ವನ್ನು ಕುರಿತು ಪ್ರಿ. ಎಸ್. ಡಿ. ಇಂಚಲ ಅವರು ಬರೆದ ಲೇಖನವನ್ನು ಇಲ್ಲಿ ಕೊಟ್ಟಿದೆ.

ರಾಜಕೀಯ ದೃಷ್ಟಿಯಿಂದ ಸ್ವತಂತ್ರವಾದ ನಮ್ಮ ಎಚ್ಚತ್ತ ಭಾರತವನ್ನು ಇದೀಗ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಸ್ವಾವಲಂಬಿಯಾದ ಸಂಪನ್ನಭಾರತವನ್ನಾಗಿಸುವ ಸಮಸ್ಯೆ ನಮ್ಮೆದುರಿಗೆ ಇದೆ. ಅಲ್ಲದೆ, ಪ್ರಜಾಪ್ರಭುತ್ವದ ರಾಜಕೀಯ ಜೀವನ ವಿಧಾನವನ್ನು ಅಳವಡಿಸಿಕೊಂಡು, ಜಾತ್ಯಾತೀತವಾದ ನವೀನ ರಾಷ್ಟ್ರವನ್ನು ಕಟ್ಟುವ ಸಾಹಸಕ್ಕೆ ನಾವಿಂದು ಕೈಹಾಕಿದ್ದೇವೆ. ಈ ಧ್ಯೇಯಸಾಧನೆಗೆಂದೇ ರಾಷ್ಟ್ರೀಯ ಶಿಕ್ಷಣ ವಿಧಾನದ ಮೂಲಶಿಕ್ಷಣವನ್ನು ಇದೀಗ ಸಾರ್ವತ್ರಿಕವಾಗಿ ಬಳಕೆಯಲ್ಲಿ ತರಲೆಂದು ತುಂಬಾ ಯತ್ನಿಸಲಾಗುತ್ತಿದೆ. ಇಂಥ ಶಿಕ್ಷಣದ ವಲಯ ವಿಸ್ತಾರಗಳನ್ನೂ, ದೃಷ್ಟಿಧ್ಯೇಯಗಳನ್ನೂ ತಿಳಿಯಪಡಿಸುವ ಶೈಕ್ಷಣಿಕಸಾಹಿತ್ಯವಾಕಷ್ಟು ಬರಬೇಕಾದುದು ಅನಿವಾರ್ಯ. ಅದರ ಕೊರತೆ ಕನ್ನಡದಲ್ಲಿ ಇನ್ನೂ ಬಹಳಸಾಗಿದೆ. ಇಂಥ ಪರಿಸ್ಥಿತಿಯಲ್ಲಿ, ಗೆಳೆಯರಾದ ಶ್ರೀ. ಮಿರ್ಜಿ ಅಣ್ಣಾರಾಯರು ತಮ್ಮ "ಮೂಲಶಿಕ್ಷಣದ ಮೌಲ್ಯಮಾಪಣ"ವೆಂಬ ಗ್ರಂಥವನ್ನು ಪ್ರಕಟಿಸುತ್ತಿರುವುದು ಅಭಿನಂದನೀಯವಾಗಿದೆ. ಮೂಲಶಿಕ್ಷಣದ ಅನೇಕ ಮುಖಗಳನ್ನು ವಿವಿಧ ದೃಷ್ಟಿಕೋನದಿಂದ ವಿವರಿಸುವ ಈ ಚಿಕ್ಕ ಹೊತ್ತಿಗೆಯು ಮೂಲಶಿಕ್ಷಣದಲ್ಲಿ ಕಾರ್ಯಮಾಡುತ್ತಿರುವ ಶಿಕ್ಷಕರಿಗೆ ಹೊತ್ತಿಗೆ ಸರಿಯಾಗಿ ಕೈಸೇರಿದ ಕೈಪಿಡಿಯಾಗಿದೆಂದು ಹೇಳಬಹುದು.

ಆದರ್ಶಜೀವಿಗಳೂ, ಅನುಭವಿಕ ಶಿಕ್ಷಕರೂ, ಸುರಿತಪರಾದ ಹಿರಿಯ ಸಾಹಿತಿಗಳೂ ಆದ ಶ್ರೀ ಮಿರ್ಜಿ ಅಣ್ಣಾರಾಯರು ಮೂಲಶಿಕ್ಷಣವನ್ನು ಆಸಕ್ತಿಯಿಂದ ಅಭ್ಯಸಿಸಿದ್ದಾರೆ. ಅಭಿಮಾನದಿಂದ ಅಕ್ಕರತೆಯಿಂದ ಮಕ್ಕಳಿಗೆ ಕಲಿಸ ಯತ್ನಿಸುತ್ತಿದ್ದಾರೆ. ಅದರ ಕುಂದುಕೊರತೆಗಳನ್ನು ಸಾವಧಾನದಿಂದ ನಿರೀಕ್ಷಿಸಿ,

ವಿವೇಕದಿಂದ ಪರೀಕ್ಷಿಸಿದ್ದಾರೆ. ಅಂಥ ಕೊರತೆಗಳ ಬಗೆಗೆ ಸೂಕ್ತ ಸಲಹೆಗಳನ್ನೂ ಸಮಾಧಾನಗಳನ್ನೂ ನೀಡುವ ಅನುಭವಸಂಪತ್ತನ್ನು ಶೇಖರಿಸಿಕೊಂಡಿದ್ದಾರೆ. ಇಂಥ ರಾಷ್ಟ್ರೀಯ ಪುರೋಗಾಮಿ ಶಿಕ್ಷಕರಾದ ಅವರ ಪಳಗಿದ ಲೇಖನಿಯಿಂದ ಮೂಡಿ ಬಂದ ಈ ಹೊತ್ತಗೆಯು ಔಚಿತ್ಯಪೂರ್ಣವಾಗಿ ಸತ್ವಯುತವಾಗಿದೆ. ಎಲ್ಲರ ಮನಂಬುಗುವ ಆಕರ್ಷಕ ಶೈಲಿಯಲ್ಲಿ ಬರೆದುದಾಗಿದೆ. ಈ ಎಲ್ಲ ಕಾರಣಗಳಿಂದ ಮೂಲಶಿಕ್ಷಣದಲ್ಲಿ ಅಭಿರುಚಿಯುಳ್ಳ ಓದುಗರಿಗೆಲ್ಲ ಇದೊಂದು ಅಚ್ಚುಮೆಚ್ಚಿನ ಗ್ರಂಥವಾಗುವದೆಂಬುದರಲ್ಲಿ ಸಂದೇಹವೇ ಇಲ್ಲ.

ಶ್ರೀಯುತರು ಈ ಪುಸ್ತಕದಲ್ಲಿ ಮೂಲಶಿಕ್ಷಣವು ಅಸ್ತಿತ್ವದಲ್ಲಿ ಬಂದ ಬಗೆಯನ್ನೂ ಉಳಿದ ಜಾಗತಿಕ ಪ್ರಗತಿಪರವಾದ ಶಿಕ್ಷಣ ವಿಧಾನಗಳ ನವ ಪ್ರಪಂಚದಲ್ಲಿ ಅದಕ್ಕಿರುವ ಸ್ಥಾನಮಾನಗಳನ್ನು ಕುರಿತು ಒಳ್ಳೇ ಹೃದಯಂಗಮವಾಗಿ ಚರ್ಚಿಸಿದ್ದಾರೆ; ಅಲ್ಲದೆ ಮೂಲಶಿಕ್ಷಣವು ಮಗುವಿನ ಸರ್ವಾಂಗೀಣ ಉನ್ನತಿಯನ್ನು ಸಾಧಿಸುವ ಜೀವನ ಶಿಕ್ಷಣವಾಗಿದೆಯೆಂಬಂಶವನ್ನು ವಿವರಿಸುತ್ತ, ಅದರ ತತ್ವಪ್ರಣಾಲಿಯನ್ನೂ ದೃಷ್ಟಿಧ್ಯೇಯಗಳನ್ನೂ ಸಾದ್ಯಂತವಾಗಿ, ಸಂಕ್ಷೇಪವಾಗಿ ವಿವರಿಸಿದ್ದಾರೆ. ಈ ಶಿಕ್ಷಣ ವಿಧಾನವನ್ನು ಯಶಸ್ವಿಯಾಗಿಸುವ ಯೋಜನೆಯ ರೂಪರೇಷೆಗಳನ್ನೂ, ಸಮವಾಯ ತತ್ವದ ಸ್ವರೂಪದರ್ಶನವನ್ನೂ, ಅನುಬಂಧ ಪದ್ಧತಿಯ ತಂತ್ರ ನಿರ್ದೇಶವನ್ನೂ ಯೋಗ್ಯ ಉದಾಹರಣೆಗಳಿಂದ ಸ್ಪಷ್ಟೀಕರಿಸಲೆತ್ನಿಸಿದ್ದು, ತುಂಬಾ ಸ್ತುತ್ಯವಾಗಿದೆ. ಕೊನೆಗೆ ಚಟುವಟಿಕೆ ಪ್ರಧಾನವಾದ ಸಮವಾಯ ಪಾಠಗಳ ಕೆಲವು ಟಿಪ್ಪಣಿಗಳನ್ನು ಕೊಟ್ಟಿರುವದು ಬಹಳೇ ಸಹಾಯಕಾರಿಯಾಗಿದೆ. ಇವುಗಳ ಜೊತೆಗೆ ಮಗುವಿನ ನೈಸರ್ಗಿಕ ಮತ್ತು ಸಾಮಾಜಿಕ ಪರಿಸರಣಕ್ಕೆ ಸಂಬಂಧಿಸಿದ ಕೆಲವು ಪಾಠಗಳನ್ನು ಜೋಡಿಸಿದ್ದರೆ ಇನ್ನೂ ಒಳಿತಾಗುತ್ತಿತ್ತೆಂದು ನನ್ನ ನಮ್ರ ಅಭಿಪ್ರಾಯವಾಗಿದೆ. ಉದ್ಯಮ ಶಿಕ್ಷಣದ ಶಾಲೆಗಳಿಂದ ಅಧಿಕೃತವಾದ ಅಂಕೆಸಂಖ್ಯೆಗಳನ್ನು ಸಂಗ್ರಹಿಸಿ, ಪರಿಸ್ಥಿತಿಯನ್ನು ಪರಿಶೀಲಿಸಿ, ಮೂಲೋದ್ಯೋಗದ ಆರ್ಥಿಕವ್ಯವಸ್ಥೆಯನ್ನು ಕುರಿತು ಕೊಟ್ಟಿರುವ ಕೋಷ್ಟಕಗಳೂ ಪರಿಣಾಮಗಳೂ ಉದ್ಯಮ ಶಿಕ್ಷಣದ ಪ್ರಗತಿ ಸುಗತಿಗಳಿಗೆ ಸಾಕ್ಷಿ ನುಡಿಯುವಂತಿವೆ. ಇವೆಲ್ಲ ಕಾರಣಗಳಿಂದಾಗಿ ಈ ಪುಸ್ತಕದ ಮೌಲ್ಯ ಅಧಿಕವಾಗಿದೆ. ವಿಶೇಷವಾಗಿ, ಜೀವನಶಿಕ್ಷಣದ

ತರಬೇತಿ ಕೇಂದ್ರಗಳಲ್ಲಿ ಓದುತ್ತಿರುವ ಶಿಕ್ಷಕವಿದ್ಯಾರ್ಥಿಗಳಿಗೂ, ಮೂಲ ಶಿಕ್ಷಣದ ಶಾಲೆಗಳಲ್ಲಿ ಕೆಲಸ ಮಾಡುತ್ತಿರುವ ಕಾರ್ಯಕರ್ತರಿಗೂ, ಶಿಕ್ಷಣಾಭಿಮಾನಿಗಳಾಗಿರುವ ಸಾರ್ವಜನಿಕರಿಗೂ ಈ ಹೊತ್ತಗೆಯು ಒಳ್ಳೇ ಉಪಯುಕ್ತವಾಗಿದೆಯೆಂದು ಹೇಳಬಹುದು.

ರಾಷ್ಟ್ರೀಯ ಶಿಕ್ಷಣವು ರೂಪುಗೊಳ್ಳುತ್ತಿರುವ ಇಂದಿನ ವಾತಾವರಣದಲ್ಲಿ ಹೊಸ ಬೆಳಕನ್ನು ಬೀರಬಲ್ಲ ಇಂಥ ಕೃತಿಗಳು ಶ್ರೀ ಮಿರ್ಜಿಯವರಿಂದ ಹೆಚ್ಚುಹೆಚ್ಚಾಗಿ ಉಜ್ವಲವಾಗಿ ಬರಲೆಂದು ಹಾರೈಸುವೆನು.

# ಎರಡು ವಿಮರ್ಶಾ ಗ್ರಂಥಗಳು

**ಶ್ರೀ ಡಿ. ಎ. ಜೋಗಾರ, ಬಿ. ಎ. ಎಲ್‌ಎಲ್. ಬಿ. ಅಥಣಿ.**

ಶ್ರೀ ಮಿರ್ಜಿ ಅಣ್ಣಾರಾಯರು ಹೊಸಗನ್ನಡ ಸಾಹಿತ್ಯಕ್ಕೆ ತಮ್ಮ ಎರಡು ವಿಮರ್ಶಾ ಗ್ರಂಥಗಳನ್ನು ಸಲ್ಲಿಸಿದ್ದಾರೆ. ಅವುಗಳಲ್ಲೊಂದು ಹೊಸ ಗನ್ನಡದ ಶ್ರೇಷ್ಠಕವಿಯಾದ 'ಅಂಬಿಕಾತನಯದತ್ತ'ರ ಬಹುಮುಖ ಕಾವ್ಯಗಂಗೆಯನ್ನು ವಿಮರ್ಶಿಸಿ, ಪರಿಚಯಮಾಡಿ ಕೊಡುವ 'ದತ್ತವಾಣಿ' ಎಂಬುದಾಗಿದೆ. ಇನ್ನೊಂದು ಪ್ರಾಚೀನ ಸಂಸ್ಕೃತ ಹಾಗೂ ಕನ್ನಡ ವಾಙ್ಮಯದಲ್ಲಿ ಚಿತ್ರಿಸಲ್ಪಟ್ಟ ಭರತೇಶನ ಪಾತ್ರವನ್ನು ತುಲನಾತ್ಮಕವಾಗಿ ಅಭ್ಯಾಸಮಾಡಿ, ಬರೆದ 'ಭರತೇಶನ ನಾಲ್ಕು ಚಿತ್ರಗಳು' ಎಂಬುದಾಗಿದೆ. ಇವೆರಡು ಗ್ರಂಥಗಳ ಪರಿಚಯ ಹಾಗೂ ಅವುಗಳಿಗೆ ಆಧುನಿಕ ಕನ್ನಡ ವಿಮರ್ಶಾ ಸಾಹಿತ್ಯದಲ್ಲಿ ಇರುವ ಸ್ಥಾನ—ಇವುಗಳನ್ನು ಕುರಿತು ಇಲ್ಲಿ ಒಂದೆರಡು ಮಾತುಗಳನ್ನು ಹೇಳಬೇಕೆಂದಿರುವೆ.

ಬಹುದಿನಗಳಿಂದ "ಹೊಸ ಕನ್ನಡ ಕವಿತೆಗಳೇ ಅರ್ಥವಾಗುವುದಿಲ್ಲ, ಇನ್ನು ಸ್ವತಃ ಕವಿಗಳೇ ಓದಿದಾಗ ಅರ್ಥವಾಗುವುದು—ಎಂದು ಮುಂತಾಗಿ ಅಭಿಪ್ರಾಯಪಡುವ ರಸಿಕವರ್ಗಕ್ಕೆ ಇಂತಹ ಪುಸ್ತಕ ಬಹಳ ಉಪಕಾರಿ ಯಾದುದು."* ಎಂದು 'ದತ್ತವಾಣಿ'ಯ ವಿಮರ್ಶಕರು ಘಂಟಾಘೋಷವಾಗಿ ಸಾರಿದ್ದಾರೆ. ಯಾಕಂದರೆ ಶ್ರೀ. ಬೇಂದ್ರೆಯವರ ಕವನಗಳ ಭಾವವು ಗೂಢ ವಾದುದು. ಅವುಗಳನ್ನು ತಿಳಿದುಕೊಳ್ಳುವುದೇ ಕಷ್ಟಕರ ಎನ್ನುವಾಗ ಅಣ್ಣಾರಾಯರು ಈ ತಮ್ಮ ವಿಮರ್ಶಾ ಗ್ರಂಥವನ್ನು ಕನ್ನಡ ವಾಚಕರ ಕೈಗಿತ್ತರು. ಈ ವಿಮರ್ಶಾ ಗ್ರಂಥವನ್ನು ಕಂಡ ರಸಿಕ ಕುಲವು ಮೆಚ್ಚಿ ಇದರಲ್ಲಿ "ತುದಿಯಿಂದ ಕಡೆತನಕ ವಾಕ್‌ಶೈಲಿಯು ಅವ್ಯಾಹತವಾಗಿ ಹರಿಯುತ್ತಿದ್ದು, ಒಂದು ಉದಾತ್ತ ವ್ಯಕ್ತಿತ್ವದ ಕಾದಂಬರಿಯಂತೆ ರಂಜಿಸು ತ್ತದೆ. ಕೆಲವು ಕಡೆ **ಮೂರ್ತಿಗಿಂತ ಅದನ್ನು ಅರಿತು ಧ್ಯಾನಿಸುವ ಆರಾಧಕನು ಹೆಚ್ಚೆಂಬ ಭಾವನೆಯನ್ನು ಹುಟ್ಟಿಸುತ್ತದೆ.** ಇದರ ಸತ್ಯ ಸ್ಥಿತಿಯನ್ನು ಕಾಣಲು ಮತ್ತು ಆಧುನಿಕ ಕವಿ ಶ್ರೇಷ್ಠನ ಮಹಿಮೆಯನ್ನು

* ಹುಬ್ಬಳ್ಳಿಯ 'ಕರ್ಮವೀರ' ವಾರಪತ್ರಿಕೆ ಜೂನ್ ೨, ೧೯೪೭.

ತಿಳಿದುಕೊಳ್ಳಲು ಕನ್ನಡಿಗನಾದ ಪ್ರತಿಯೋರ್ವನು ಇದನ್ನು ಓದಬೇಕು."* ಎಂದು ಬಾಯ್ತುಂಬ ಹೊಗಳಿ, ಈ 'ದತ್ತವಾಣಿ'ಗೆ ಸ್ವಾಗತವನ್ನಿತ್ತಿತು. ಶ್ರೀ ಶಿವರಾಮ ಕಾರಂತರು ನಿಸರ್ಗದಂಥ ಹತ್ತು ಕಾದಂಬರಿ ಕರ್ನಾಟಕಕ್ಕೆ ಬಂದರೆ ಸಾಕು." ಎಂದು ಹೇಳಿಬಿಟ್ಟರು!† ಕಾದಂಬರಿ ಕ್ಷೇತ್ರದಲ್ಲಿ ಹೀಗೆ ತಮ್ಮ ಮೊದಲ ಕೃತಿಯಲ್ಲಿಯೇ ಕಲಾಪ್ರೌಢಿಮೆಯನ್ನು ತೋರಿಸಿದ ಮಿರ್ಜಿ ಯವರು ವಿಮರ್ಶಾಕ್ಷೇತ್ರದಲ್ಲಿಯೂ ಅದೇ ಮಟ್ಟದ ಯೋಗ್ಯತೆಯನ್ನು ಪ್ರದರ್ಶಿಸಿದರು. 'ದತ್ತವಾಣಿ'ಯನ್ನು ಅವರು ಚಿತ್ತರಿಸುವಲ್ಲಿ ಈ ಗುಣ ವನ್ನು ನಾವು ಕಾಣುತ್ತೇವೆ.

'ದತ್ತವಾಣಿ'ಯಲ್ಲಿ ಬೇಂದ್ರೆಯವರ ಕಾವ್ಯದೊಳಗಿನ ರಾಷ್ಟ್ರೀಯಭಾವ, ಪ್ರಕೃತಿ ಪ್ರೇಮ, ಸಾಮಾಜಿಕ ವಿಚಾರಗಳು, ಆಧ್ಯಾತ್ಮಿಕತೆ, ಪ್ರೇಮ, ಸಖ್ಯಭಾವ, ನಿಗೂಢ ಸತ್ಯ ಈ ಸಪ್ತಮುಖದ ಸೌಂದರ್ಯಾಭಿವ್ಯಕ್ತಿಯನ್ನು ಲೇಖಕರು ವಿವೇಚಿಸಿದ್ದಾರೆ. ಅಲ್ಲಲ್ಲಿ ಕವಿಯ ಕಾವ್ಯದೊಳಗಿನ ಸಂದರ್ಭ ಗಳನ್ನು ಎತ್ತಿಕೊಂಡು, ಜನಸಾಮಾನ್ಯರಿಗೆ ಅರ್ಥವಾಗದ ಅಂಶಗಳನ್ನು ವಿಸ್ತರಿಸಿ, ಘನೀಭೂತವಾಗಿರುವ ಮಾತಿನ ಹಿಂದಿನ ಭಾವವನ್ನು ವ್ಯಕ್ತವಡಿಸಿ ತೋರಿಸಿದ್ದಾರೆ. ಹೀಗೆ ಆಧುನಿಕ ಕನ್ನಡ ಕವಿಯೊಬ್ಬನ ಸಮಗ್ರ ಕವಿತೆ ಗಳನ್ನು ಅಭ್ಯಸಿಸಿ, ಬರೆದ ಈ ಮಾದರಿಯ ಗ್ರಂಥವು ಕನ್ನಡದಲ್ಲಿ ಇದು ಮೊದಲನೆಯದಾಗಿದೆ.‡ ಆದರೂ ಯಶಸ್ವಿಯಾದ ಕೃತಿಯಾಗಿದೆ. ಲೇಖಕರ ಕಾವ್ಯರಸಿಕತೆಯ ಪ್ರತೀಕವಾಗಿದೆ.

ಇನ್ನು ಮಿರ್ಜಿಯವರ 'ಭರತೇಶನ ನಾಲ್ಕು ಚಿತ್ರಗಳು' ಇನ್ನೊಂದು ಮಾದರಿಯ ವಿಮರ್ಶಾಗ್ರಂಥವಾಗಿದೆ. ಇದರಲ್ಲಿ ಲೇಖಕರು ಪೂರ್ವ ಪುರಾಣದ ಪ್ರಥಮ ಚಕ್ರಿ, ಪಂಪನ ಪುಣ್ಯಪುರುಷ, ಭಾಗವತದ ಭರತ-ಜಡ

---

* "ಸ್ವದೇಶಾಭಿಮಾನಿ" ೧೩-೧೨-೧೯೪೬ ರ ಸಂಚಿಕೆ.

† ಬೆಂಗಳೂರಿನ 'ಛಾಯಾ' ಮಾಸಿಕದ ಮಾರ್ಚ ೧೯೪೭ ರ ಸಂಚಿಕೆಯಲ್ಲಿ ಉದ್ಧೃತವಾಗಿದೆ.

‡ A young writer who has won his spurs as a novelist has come out with such aid. His book is almost the first of its kind dealing with the whole work of a modern Kannada poet. —V. SITARAMIAH.

—*Hindu, June 1, 1947.*

ಭರತ ಮತ್ತು ರತ್ನಾಕರನ ರಸಋಷಿಗಳೆಂಬ ನಾಲ್ಕು ಚಿತ್ರಗಳನ್ನು ಕೊಡಲಿಕ್ಕೆ ಯತ್ನಿಸಿದ್ದಾರೆ. ಭಗವದ್ ಜಿನಸೇನಾಚಾರ್ಯರ ಸಂಸ್ಕೃತ ಮಹಾಪುರಾಣ ಕಾವ್ಯದ ಪೂರ್ವಭಾಗದಲ್ಲಿಯೂ, ಪಂಪನ ಆದಿಪುರಾಣದಲ್ಲಿಯೂ, ವ್ಯಾಸನ ಭಾಗವತದಲ್ಲಿಯೂ, ರತ್ನಾಕರನ ಭರತೇಶವೈಭವದಲ್ಲಿಯೂ ಮೂಡಿದ ಭರತ ಚಕ್ರವರ್ತಿಯ ಪಾತ್ರದ ಅಭ್ಯಾಸವನ್ನು ತುಲನಾತ್ಮಕವಾಗಿ ಇಲ್ಲಿ ಮಾಡ ಲಾಗಿದೆ. ಕನ್ನಡ ವಾಙ್ಮಯದಲ್ಲಿ ಶ್ರೀ ಶಂ. ಬಾ. ಜೋಶಿಯವರ 'ಕರ್ಣನ ಮೂರು ಚಿತ್ರಗಳು' ಎಂಬುದನ್ನು ಬಿಟ್ಟರೆ ಈ ಮಾದರಿಯ ಕೃತಿ ಇನ್ನೊಂದಿಲ್ಲ. ಮಿರ್ಜಿಯವರು ಈ ಗ್ರಂಥದ ಕೊನೆಗೆ ಭರತನ ಪಾತ್ರಕ್ಕೆ ಸಂಬಂಧಿಸಿದ ಪದ್ಯ ಗಳನ್ನು ಪೂರ್ವಪುರಾಣ, ಭಾಗವತಗಳಿಂದ ಸಂಗ್ರಹಿಸಿ ಕೊಟ್ಟಿದ್ದಾರೆ. ಅದರಿಂದ ಗ್ರಂಥದ ಉಪಯುಕ್ತತೆಯು ಇನ್ನೂ ಹೆಚ್ಚಿದೆ. ಮೂಲಕೃತಿ ಯೆಂಬ ಭವ್ಯ ಕಟ್ಟಡದೊಳಗಿನ ತಮ್ಮ ಆರಾಧ್ಯ ಮೂರ್ತಿಯನ್ನು ಎತ್ತಿ ತೋರಿಸುವಲ್ಲಿ ಲೇಖಕರು ರಸಿಕತೆಯನ್ನೂ ಚಾತುರ್ಯವನ್ನೂ ತೋರಿಸಿ ದ್ದಾರೆ. ಅದರಿಂದ ಈ ಕೃತಿಯೂ ದತ್ತವಾಣಿಯಂತೆ ಮನೋಹರವಾಗಿದೆ.

ಮಿರ್ಜಿಯವರ ಇವೆರಡೂ ಕೃತಿಗಳು ಹೊಸಗನ್ನಡ ವಿಮರ್ಶಾ ವಾಙ್ಮಯದಲ್ಲಿ ಎರಡು ಮೈಲುಗಲ್ಲುಗಳಿದ್ದಂತಿವೆ. ಅದರಲ್ಲಿ ಅವುಗಳ ವೈಶಿಷ್ಟ್ಯವೂ ಇದೆ

# ಅಣ್ಣಾರಾಯರ ಸಾಂಸ್ಕೃತಿಕ ಅಭ್ಯಾಸ

**ಶ್ರೀ ಅನಂತರಾವ ಕೆ. ಭೋಸಗೆ, ಸೇಡಬಾಳ.**

ಶ್ರೀ ಮಿರ್ಜಿ ಅಣ್ಣಾರಾಯರ "ಭಾರತೀಯ ಸಂಸ್ಕೃತಿಯ ವಿಕಾಸ" ಎಂಬ ಬೃಹದ್‌ಗ್ರಂಥದ ಮುನ್ನ 'ಕಣ್ಣುನ್ನೆ'ಯಾಗಿ "ಭಾರತೀಯ ಸಂಸ್ಕೃತಿಯ ಹೃದಯ" ಪ್ರಕಟವಾಗಿದೆ ಎನ್ನಬೇಕು. ಇದರಲ್ಲಿ ಶ್ರೀಯುತರು ಕರ್ನಾಟಕ ಹಾಗೂ ಮಹಾರಾಷ್ಟ್ರಗಳ ವಿವಿಧ ನಗರಗಳಲ್ಲಿ ಆಗಾಗ ಮಾತನಾಡಿದ ಹದಿ ಮೂರು ಉಪನ್ಯಾಸಗಳಿವೆ. ಇವುಗಳಲ್ಲಿ ಮೊದಲನೆಯ ಪ್ರಬಂಧವಾದ 'ಭಾರತೀಯ ಸಂಸ್ಕೃತಿಯ ಹೃದಯ'ವೆಂಬ ಉಪನ್ಯಾಸದ ಹೆಸರನ್ನೇ ಎತ್ತಿ, ಈ ಭಾರತೀಯ ಸಂಸ್ಕೃತಿಯನ್ನು ವಿವೇಚಿಸುವ ಉಪನ್ಯಾಸಗಳ ಸಂಕಲನಕ್ಕೆ ಹೆಸರನ್ನಿಡಲಾಗಿದೆ. ಆದರೂ ಇದರಲ್ಲಿ ಭಾರತೀಯ ಸಾಹಿತ್ಯ, ಅಧ್ಯಾತ್ಮ, ಪ್ರದೇಶ ಪರಿಚಯಗಳಿಗೆ ಸಂಬಂಧಿಸಿದ ಕೆಲವು ಬರಹಗಳಿವೆ. ಆದರೂ ಅವೆಲ್ಲ ಸಂಸ್ಕೃತಿಯ ವಿಚಾರವನ್ನೇ ನಿರೂಪಿಸುತ್ತವೆ.

'ಭಾರತೀಯ ಸಂಸ್ಕೃತಿಯನ್ನು ಅಭ್ಯಸಿಸುವಾಗ ಯಾವಾಗಲೂ ಪೂರ್ಣ ದೃಷ್ಟಿಯು ಬೇಕು. ಸಾಂಪ್ರದಾಯಿಕ ದೃಷ್ಟಿಯಿಂದ ಭಾರತೀಯ ಸಂಸ್ಕೃತಿ ಯನ್ನು ನಿರೂಪಿಸುವುದು ಸರಿಯಲ್ಲ.' ಎಂಬ ವಿಶಾಲ ದೃಷ್ಟಿಕೋಣವನ್ನಿಟ್ಟು ಕೊಂಡು, 'ಭಾರತೀಯ ಸಂಸ್ಕೃತಿಯ ಹೃದಯ' ಎಂಬ ಉಪನ್ಯಾಸದಲ್ಲಿ ವಿವಿಧ ಧರ್ಮಗಳನ್ನು ತುಲನಾತ್ಮಕವಾಗಿ ವಿವೇಚಿಸಿದ್ದಾರೆ. ಅದರಲ್ಲಿ ಜೈನಸಂಸ್ಕೃ ತಿಯು ಕಲ್ಯಾಣಕಾರಿಯಾದ ಪ್ರವೃತ್ತಿ ಮಾರ್ಗವನ್ನು ಸ್ವೀಕರಿಸುತ್ತ, ನಿವೃ ತ್ತಿಯ ಮೇಲೆ ಕಣ್ಣಿಟ್ಟು ಹೇಗೆ ವಿಕಾಸ ಹೊಂದಿದೆಯೆಂಬುದನ್ನು ಸುಂದರ ವಾಗಿ ವಿವರಿಸಿದ್ದಾರೆ.

ಇತ್ತೀಚಿನ ಪ್ರಾಗ್ಭಾರತೀಯ ಸಂಶೋಧನಗಳ ಅಭ್ಯಾಸವನ್ನು ಮಾಡಿ, ಭಾರತೀಯ ಧರ್ಮ ಮತ್ತು ಸಂಸ್ಕೃತಿಗಳು ವೇದಪೂರ್ವ ಕಾಲದಲ್ಲಿಯೂ ಎಷ್ಟು ಉನ್ನತವಾಗಿದ್ದವೆಂಬುದನ್ನು ಇಲ್ಲಿ ಲೇಖಕರು ತೋರಿಸಲು ಯತ್ನಿಸಿ ದ್ದಾರೆ. ವೈಧಿಕಧರ್ಮವು ಭಾರತದಲ್ಲಿ ಹೊರಗಿನಿಂದ ಬಂದ ಆರ್ಯ ಜನಾಂಗದ ಒಂದು ಗುಂಪಿನಿಂದ ರೂಪುಗೊಂಡು, ಇಲ್ಲಿ ನೆಲೆಯೂರುವ ಪೂರ್ವದಲ್ಲಿ 'ಸಿಂಧೂತೀರದ ಸಂಸ್ಕೃತಿ'ಯು ತನ್ನ ನಿವೃತ್ತಿಪರವಿಚಾರ ಗಳಿಂದ ಹೇಗೆ ಸುಸ್ಥಿರವಾಗಿತ್ತೆಂಬುದನ್ನು ಇವರು 'ಭಾರತೀಯ ಸಂಸ್ಕೃತಿಗೆ

ಜೈನಧರ್ಮದ ಕಾಣಿಕೆ' ಎಂಬ ಲೇಖನದಲ್ಲಿ ವಿಮರ್ಶಿಸುತ್ತ ವೈದಿಕ ಧರ್ಮವು ವೃಷಭದೇವನ ನಿವೃತ್ತಿ ಧರ್ಮವನ್ನು ಸ್ವೀಕರಿಸಿ, ಹೇಗೆ ವಿಕಾಸ ಹೊಂದಿತೆಂಬುದನ್ನು ವಿವೇಚಿಸಿದ್ದಾರೆ. ಶೈವ, ಶ್ರಮಣ ಪರಂಪರೆಗಳ ಪ್ರಾಗ್ವೈದಿಕ ಸಂಬಂಧದ ಮೇಲೆ ಬೆಳಕನ್ನು ಬೀರಿ, ಸಂಸ್ಕೃತಿಯ ಅಭ್ಯಾಸಿಗಳಿಗೆ ಹೊಸದೊಂದು ಕ್ಷೇತ್ರವನ್ನು ಕಲ್ಪಿಸಿಕೊಟ್ಟಿದ್ದಾರೆ. ಈ ವಿವೇಚನೆಯಿಂದ, ವೈದಿಕರು ಗೃಹಸ್ಥಾಶ್ರಮದ ತರುವಾಯವೇ 'ಸನ್ಯಾಸ' ಎಂಬ ತಮ್ಮ ಆಶ್ರಮಪದ್ಧತಿಯಲ್ಲಿ ವ್ಯತ್ಯಾಸ ಮಾಡಿಕೊಂಡು, ಬಾಲಬ್ರಹ್ಮಚಾರಿಗಳೂ ಕೂಡ ಸನ್ಯಾಸವನ್ನು ಸ್ವೀಕರಿಸುವ ಪರಿಪಾಠವನ್ನು ಹಾಕಿಕೊಂಡರೆಂಬ ಮಾತು ಸ್ಪಷ್ಟವಾಗಿದೆ. ಇದಕ್ಕೆ ಲೇಖಕರು ಶ್ರೀ ಶಂಕರಾಚಾರ್ಯರಿಂದ ಸ್ವಾಮಿ ವಿವೇಕಾನಂದರ ವರೆಗೆ ವೈದಿಕಧರ್ಮದಲ್ಲಿ ಆಗಿಹೋದ ಬಾಲ ಬ್ರಹ್ಮಚಾರಿಗಳ ಸನ್ಯಾಸ ಜೀವನಕ್ರಮವನ್ನು ಉದಾಹರಣೆಗೆಂದು ಉದ್ಧರಿಸಿ ತೋರಿಸಿದ್ದಾರೆ.

ವಿಶಾಲವಾದ ಇತಿಹಾಸದ ಅಭ್ಯಾಸ, ಭಾರತೀಯ ವಿವಿಧ ಭಾಷೆಗಳಲ್ಲಿ ನಡೆದ ಐತಿಹಾಸಿಕ ಸಂಶೋಧನಗಳ ಅರಿವು ಇಲ್ಲದವರಿಗೆ ಈ ಗ್ರಂಥದಲ್ಲಿ ಪ್ರತಿಪಾದಿಸಿದ ವಿಷಯಗಳು ತೀರ ಹೊಸವೂ ಅಪರಿಚಿತವೂ ಎನಿಸುವುದರಲ್ಲಿ ಸಂದೇಹವಿಲ್ಲ. ಋಗ್ವೇದದ ಕಾಲದಲ್ಲಿಯೂ ಕೂಡ ವೈದಿಕರ ಯಜ್ಞದಲ್ಲಿ ಆಗುವ ಪ್ರಾಣಿವಧೆಯನ್ನು ನಿಷೇಧಿಸುವ ಜನರೂ ಇದ್ದರೆಂಬುದನ್ನು 'ಶುನಃಶೇಫನ' ಕಥೆಯಿಂದ ಸ್ಪಷ್ಟಪಡಿಸಿದ್ದಾರೆ. ಮುಂದೆ ಇದೇ ಪ್ರಬಂಧದಲ್ಲಿ ಬೌದ್ಧ ಧರ್ಮವು ಹಿಂದೂಧರ್ಮದಲ್ಲಿ ವಿಲೀನವಾಗಲಿಕ್ಕೂ ಜೈನಧರ್ಮವು ಸ್ವತಂತ್ರವಾಗಿ ಇದುವರೆಗೆ ಬಾಳಿಬಂದಿರುವದಕ್ಕೂ ಇರುವ ತಾತ್ವಿಕ ಕಾರಣ ಪರಂಪರೆಗಳನ್ನು ವಿವರಿಸಿದ್ದಾರೆ. ಹಾಗೆಯೇ ಪಾಶ್ಚಾತ್ಯರಾಷ್ಟ್ರಗಳ ಸಂಸ್ಕೃತಿಯು ಆಧ್ಯಾತ್ಮಿಕ ತಳಹದಿಯಿಲ್ಲದೆ ಆಗಾಗ ಹೇಗೆ ಮುಗ್ಗರಿಸಿತೆಂಬುದನ್ನೂ ಪ್ರತಿಪಾದಿಸಿದ್ದಾರೆ. ವಿಮರ್ಶಕರು ಹೇಳಿದಂತೆ "ಧರ್ಮ, ಸಾಹಿತ್ಯ, ಜನಜೀವನಗಳ ವಿಷಯದಲ್ಲಿ ಲಿಖಿತವಾದ ಈ ಲೇಖನಗಳಲ್ಲಿ ಹೃದಯೌದಾರ್ಯವು ಕಾಣುವದಲ್ಲದೆ ವಿಶಾಲ ಭಾರತೀಯ ದೃಷ್ಟಿಯೂ ಕಂಡುಬಂದಿದೆ. ತಮ್ಮ ಧಾರ್ಮಿಕ ವಿಷಯಗಳ ಲೇಖನಗಳ ಮೂಲಕ ಭಾರತದ ಸಂಸ್ಕೃತಿಯ ಹಿರಿಮೆಯನ್ನು ಎತ್ತಿ ತೋರಿಸಿದ್ದಾರೆ."* ಇದರಿಂದ ವಿವಿಧ ಭಾಗಗಳ ಹಾಗೂ ಧರ್ಮಗಳ

* "ಕರ್ಮವೀರ" ವಾರಪತ್ರಿಕೆ ಹುಬ್ಬಳ್ಳಿ. ೮–ಅಕ್ಟೋಬರ, ೧೯೫೬.

ಭಾರತೀಯರು ತಮ್ಮ ಅಖಂಡ ರಾಷ್ಟ್ರೀಯತ್ವವನ್ನು ಅರಿತುಕೊಂಡು ಬಾಳ ಲಿಕ್ಕೆ ಕಲ್ಪನೆಯು ಉಂಟಾಗುತ್ತದೆ.

"ಮಿರ್ಜಿಯವರು ಒಳ್ಳೆಯದನ್ನು ತೋರಿಸಲಿಕ್ಕೂ ಇದರೊಳಗೆ ಹುದುಗಿದ ಸತ್ವವನ್ನು ತೆರೆದಿಡಲಿಕ್ಕೂ ಯಶಸ್ವಿಯಾಗಿದ್ದಾರೆ."* ಎಂದು ಪ್ರೊ. ವಿ. ಸೀತಾರಾಮಯ್ಯನವರು ಒಂದೆಡೆಗೆ ಅಣ್ಣಾರಾಯರ ವಿಮರ್ಶಾ ಗ್ರಂಥವಾದ 'ದತ್ತವಾಣಿ'ಯನ್ನು ಸಮೀಕ್ಷಿಸುತ್ತ ನುಡಿದಿದ್ದಾರೆ. ಈ ಮಾತನ್ನು ಇಲ್ಲಿಯ 'ಸಾಹಿತ್ಯದ ಗೊತ್ತುಗುರಿಗಳು' ಎಂಬ ಪ್ರಬಂಧಕ್ಕೂ ಅನ್ವಯಿಸಿ ಹೇಳಬಹುದಾಗಿದೆ. ಈ ಪ್ರಬಂಧದಲ್ಲಿ ವೇದಪುರಾಣಗಳ ಕಾಲ ದಿಂದಲೂ ಭಾರತೀಯ ಸಾಹಿತ್ಯವು ಹೇಗೆ ವಿಕಾಸವಾಯಿತೆಂಬುದನ್ನು ಸೂತ್ರ ರೂಪದಲ್ಲಿ ಸೂಚಿಸಿದ್ದಾರೆ. ಕಾವ್ಯರಚನೆಗೆ ತಪಸ್ಸು ಮುಖ್ಯ. ಅದರ ಜೊತೆಗೆ ಸಹೃದಯತೆಯೂ ಆವಶ್ಯಕ. ಇವುಗಳ ಕೊರತೆಯಾಗಿ ಕೇವಲ ವಿದ್ವತ್ತು ಹೆಚ್ಚಾದರೆ ಕಾವ್ಯವು ಹೇಗೆ ಶಾಸ್ತ್ರವಾಗಿ ಪರಿಣಮಿಸುವದೆಂಬುದನ್ನು ಬೇರೆ ಬೇರೆ ಉದಾಹರಣೆಗಳಿಂದ ತಿಳಿಯಪಡಿಸಿದ್ದಾರೆ. ಶೈವ, ಜೈನ, ವೈಷ್ಣವ ಸಾಹಿತ್ಯಗಳು ಭಾರತೀಯ ಸಾಹಿತ್ಯದ 'ಮೂರು ಮುಖಗಳು' ಎಂಬ ಒಂದು ನವೀನ ಕಲ್ಪನೆಯನ್ನು ಶ್ರೀಯುತರು ಓದುಗರ ಅವಗಾಹನೆಗೆ ತಂದಿದ್ದಾರೆ. ಈ ದೃಷ್ಟಿಕೋನದ ಹಿನ್ನೆಲೆಯನ್ನಿಟ್ಟುಕೊಂಡು, ಆಧುನಿಕ ಕನ್ನಡದ ಮಹಾ ಕವಿ ಶ್ರೀ. 'ಕುವೆಂಪು' ಅವರು ರಚಿಸಿದ 'ಶ್ರೀರಾಮಾಯಣ ದರ್ಶನಂ' ಎಂಬ ಮಹಾಕಾವ್ಯದ ಅವಲೋಕನವನ್ನು ಮಾಡಿದಾಗ ಆ ಕಾವ್ಯದ ಮಹತಿಯನ್ನು ಓದುಗರು ಅರಿಯಬಹುದೆಂದು ಸೂಚಿಸಿದ್ದಾರೆ.

ಈ ಗ್ರಂಥದಲ್ಲಿಯ ಸಂಸ್ಕೃತಿಯ ಅಭ್ಯಾಸಕ್ಕೆ ಕನ್ನಡ ಜಾನಪದ ಗೀತ ಗಳನ್ನೂ, ಉತ್ತರ ಭಾರತದ ಪ್ರವಾಸದ ಅನುಭವಗಳನ್ನೂ ಲೇಖಕರು ಉಪಯೋಗಿಸಿಕೊಂಡು, ಆಯಾ ವಿಷಯಗಳನ್ನು ಕುರಿತು, ತಾವು ಬೇರೆ ಬೇರೆ ಸ್ಥಳಗಳಲ್ಲಿ ಮಾಡಿದ ವ್ಯಾಖ್ಯಾನಗಳನ್ನು ಇದರಲ್ಲಿ ಸಂಗ್ರಹಿಸಿಕೊಟ್ಟಿ ದ್ದಾರೆ. ಅವು ಕಿರಿದರಲ್ಲಿ ಹಿರಿದರ್ಥವನ್ನು ಹೇಳುವ ಪ್ರಬಂಧಗಳಾಗಿವೆ.

ಇದರಂತೆ 'ಸಾಹಿತ್ಯ ಮತ್ತು ಜನಪದ' ಎಂಬ ಲೇಖನವು ಭಾರತೀಯ

---

* "Mr. Mirji Anna Rao has succeeded in showing us a good deal at least of its secret and strength."

—V. SITARAMIAH.

—*Hindu June 1, 1947.*

ಸಾಹಿತ್ಯದ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯವನ್ನು ಸ್ಥೂಲವಾಗಿ, ಸಿಂಹಾವಲೋಕನ ಮಾಡುವುದು. ಇದು ನಾಡಿನ ಸಂಸ್ಕೃತಿಗೂ ಸಾಹಿತ್ಯಕ್ಕೂ ಇರುವ ಅನ್ಯೋನ್ಯ ಸಂಬಂಧವನ್ನು ಬಹುಸುಂದರವಾಗಿಯೂ ಮಾರ್ಮಿಕವಾಗಿಯೂ ಉದಾಹರಣೆ ಸಹಿತ ಪ್ರತಿಪಾದಿಸುವ ಪ್ರಬಂಧವಾಗಿದೆ. ಇನ್ನುಳಿದ ಪ್ರಬಂಧಗಳಾದ 'ಜೀವನ ಮತ್ತು ಸಾಹಿತ್ಯ', 'ಸಹಜೀವನ ತತ್ತ್ವ ಮತ್ತು ಜೈನಧರ್ಮ', 'ಅಹಿಂಸಾ ಪರಮೋ ಧರ್ಮಃ', ಮತ್ತು 'ಸೌಖ್ಯದ ಸಮತೆ' ಮೊದಲಾದವುಗಳು ಲೇಖಕರ ಉಚ್ಚ ಮನೋಧರ್ಮ, ಸೂಕ್ಷ್ಮವಾದ ಅಭ್ಯಾಸ, ವಿಶಾಲವಾದ ಹೃದಯುವನ್ನು ವ್ಯಕ್ತಪಡಿಸುತ್ತಲಿವೆ. ಶ್ರೀ. ಶೇಷರಾಘವಾಚಾರ್ಯರು ಹೇಳಿದಂತೆ ಮಿರ್ಜಿ ಅಣ್ಣಾರಾಯರ "ವಿಚಾರಪ್ರದವೂ ಬೋಧಪ್ರದವೂ, ಆದ ಈ ಭಾಷಣಮಾಲೆ ಸಾಹಿತ್ಯಾಭ್ಯಾಸುಗಳೆಲ್ಲ ಓದಲು ಅರ್ಹವಾಗಿದೆ. ವಿಷಯುಗಳು ಪ್ರತ್ಯೇಕ ಪ್ರತ್ಯೇಕವಾಗಿದ್ದು, ಸಂಸ್ಕೃತಿಯ ನಾನಾ ರೂಪಗಳನ್ನು ಆವರಿಸಿವೆ. ಅನೇಕ ಉಪಯುಕ್ತ ವಿಷಯುಗಳಿಂದ ಕೂಡಿ, ಮಾನವನ ಚಿತ್ತವನ್ನು ಹೊಡೆದೆಬ್ಬಿಸಿ ನವೋದಯದಲ್ಲಿ ಮುಂದುವರಿಯುತ್ತಿರುವ ಈ ಕಾಲದಲ್ಲಿ ಈ ಲೇಖನಗಳು ಜ್ಞಾನಾಭಿವೃದ್ಧಿಗೆ ಸಹಕಾರಿಗಳಾಗುತ್ತವೆ."* ಇಲ್ಲಿಯ ಸಂಸ್ಕೃತಿಯ ಅಭ್ಯಾಸ, ವಿಚಾರಗಳು ಜಾತಿ, ಧರ್ಮಗಳ ನಿರಪೇಕ್ಷವಾಗಿದ್ದು, ಭಾರತೀಯ ಸಂಸ್ಕೃತಿಯ ಸಮಗ್ರ ದೃಷ್ಟಿಯನ್ನು ಪ್ರದರ್ಶಿಸುತ್ತವೆ.

ಇಂಥ ವಿಚಾರಸಾಹಿತ್ಯ ಕನ್ನಡದಲ್ಲಿ ತೀರ ಕಡಿಮೆ. ಅದು ಕನ್ನಡದಲ್ಲಿ ಇನ್ನೂ ಬಹಳ ಬೆಳೆಯಬೇಕಾಗಿದೆ. ಅದಕ್ಕಾಗಿ ಈ ಉಪನ್ಯಾಸ ಸಂಕಲನವನ್ನು ಅಖಿಲ ಭಾರತ ಬಾನುಲಿಯ ಧಾರವಾಡ ಕೇಂದ್ರದವರು ವಿಮರ್ಶಿಸುತ್ತ "ಎಲ್ಲ ಜೈನಧರ್ಮಪ್ರಿಯರೂ ತತ್ತ್ವಾಭ್ಯಾಸಿಗಳೂ ಅಗತ್ಯವಾಗಿ ಓದಬೇಕಾದ ಪುಸ್ತಕ" ಎಂದು ಸಾರಿದ್ದಾರೆ. ಇಂಥ ಅಮೌಲ್ಯ ಗ್ರಂಥದ ಕಾಣಿಕೆಯನ್ನು ಕನ್ನಡಕ್ಕೆ ಒದಗಿಸಿಕೊಟ್ಟ ಶ್ರೀ. ಮಿರ್ಜಿಯವರಿಂದ ಇನ್ನೂ ಹೆಚ್ಚಾಗಿ ವಿಚಾರಾತ್ಮಕ ಸಾಹಿತ್ಯವು ಬರಲೆಂದು ಹಾರೈಸುತ್ತೇವೆ. ಅವರ 'ಭಾರತೀಯ ಸಂಸ್ಕೃತಿಯ ವಿಕಾಸ'ವೆಂಬ ಬೃಹದ್‌ಗ್ರಂಥದ ಪ್ರಕಾಶನದಿಂದ ಕನ್ನಡ ವಿಚಾರಸಾಹಿತ್ಯದಲ್ಲಿ ಒಂದು ಅನುಪಮ ಗ್ರಂಥವು ಬೆಳಕಿಗೆ ಬರುವದೆಂದು ನಿರೀಕ್ಷಿಸುತ್ತೇವೆ.

* ಬೆಂಗಳೂರಿನ 'ಚಿತ್ರಗುಪ್ತ' ವಾರಪತ್ರಿಕೆ. ೧೮ ಮಾರ್ಚ, ೧೯೫೬.

# ನಡೆದು ಬಂದ ದಾರಿ

ಮಿರ್ಜಿ ಅಣ್ಣಾರಾಯರು ಸಾಹಿತ್ಯ ನಿರ್ಮಿತಿಯ ವಿಷಯದಲ್ಲಿ ಒಂದೆಡೆಗೆ ಹೀಗೆ ನುಡಿದಿದ್ದಾರೆ: "ಸಾಹಿತಿಯ ಅಂತರಂಗ ಅರಳಿದಷ್ಟು ಅನುಭವ ಪ್ರಪಂಚ ವಿಸ್ತಾರಗೊಂಡಷ್ಟು—ಕೃತಿ ರಚನೆಯಾಗಬೇಕು. ಬರಹಗಾರನ ಭಾವಸೃಷ್ಟಿಯ ಬೆನ್ನುಹತ್ತಿ ಸಾಹಿತ್ಯನಿರ್ಮಿತಿಯಾಗುವುದು ಒಳಿತು. ಕೃತಿಯು ಕರ್ತೃವಿನ ಮುಂದೆ ಮುಂದೆ ನಡೆಯುವ ಸೇವಕನೆಂದೂ ಆಗಕೂಡದು."* ಇದರಿಂದ ಇವರ ಸಾಹಿತ್ಯರಚನೆಯು ಇವರ ಜೀವನವಿಕಾಸವನ್ನು ಹಿಂಬಾಲಿಸಿ, ಬೆಳೆದು ಬಂದಿದೆಯೆಂದು ನಾವು ಹೇಳಬಹುದಾಗಿದೆ. ಒಳ್ಳೆಯ ಜೀವನ ಬಾಳಬೇಕು, ಸುತ್ತಲಿನವರನ್ನೂ ಒಳ್ಳೆಯ ರೀತಿಯಿಂದ ಬಾಳಿಸಬೇಕು—ಎಂಬ ಹಿರಿಯ ಹಂಬಲವನ್ನಿಟ್ಟುಕೊಂಡು ಸಾಗಿದವರು ಇವರು. ಈ ಸಾಧನೆಯಲ್ಲಿ ಅವರಿಗೆ ಬಂದ ಅನುಭವಪ್ರಪಂಚದ ಚಿತ್ರಣವೇ ಅವರ ಸಾಹಿತ್ಯದಲ್ಲಿ ಮೂಡಿನಿಂತಿದೆ. ಅದರಿಂದ ಅವರ ಸಾಹಿತ್ಯ ಅವರ ಭಾವಚಿತ್ರವಾಗಿದೆ.

ಕಳೆದ ಹತ್ತು ಹನ್ನೆರಡು ವರ್ಷಗಳಲ್ಲಿ ಮಿರ್ಜಿಯವರು ಮೂವತ್ತಕ್ಕೆ ಮೇಲ್ಪಟ್ಟು ಪುಸ್ತಕಗಳನ್ನೂ ನೂರಾರು ಲೇಖನಗಳನ್ನೂ ಬರೆದು ಕನ್ನಡ ಸಾಹಿತ್ಯದೇವಿಯನ್ನು ಅಲಂಕರಿಸಿದ್ದಾರೆ. ಸುಮಾರು ಹತ್ತುಸಾವಿರ ಪುಟಗಳಷ್ಟು ಇವರ ಬರವಣಿಗೆಯಾಗಿದೆ. ಅವರಲ್ಲಿ ಕಥೆ, ಕಾದಂಬರಿ, ಕವನ, ವಿಮರ್ಶೆ, ಚರಿತ್ರೆ, ವ್ಯಕ್ತಿಚಿತ್ರ, ನಾಟಕ, ಶಾಸ್ತ್ರಗ್ರಂಥ, ಪ್ರಬಂಧ ಇತ್ಯಾದಿಯಾಗಿ ಸಾಹಿತ್ಯದ ವಿವಿಧ ಅಂಗಗಳಲ್ಲೂ ಇವರು ಕೃತಿರಚನೆಯನ್ನು ಮಾಡಿದ್ದಾರೆ. ಅನೇಕ ವಿಷಯಗಳನ್ನು ವಿಚಾರಿಸಿದ್ದಾರೆ, ವಿವೇಚಿಸಿದ್ದಾರೆ. ಅದರ ಸ್ಥೂಲ ರೂಪರೇಖೆಯನ್ನು ಇಲ್ಲಿ ಸಂಪಾದಿಸಿಕೊಡಲಾಗಿದೆ. ಇದೂ ಸಾಹಿತ್ಯಾಭ್ಯಾಸಿಗಳಿಗೆ ಉಪಯುಕ್ತವಾದೀತೆಂದು ಬಗೆದಿದ್ದೇವೆ.

---

* 'ರಾಷ್ಟ್ರಪುರುಷ' ಕೃತಿಯ ಹುಟ್ಟು ಎಂಬಲ್ಲಿ.

# I. ಗ್ರಂಥಸೂಚಿ

| ಕ್ರಮ ಸಂಖ್ಯೆ | ಗ್ರಂಥದ ಹೆಸರು | ಸಾಹಿತ್ಯ ಪ್ರಕಾರ | ಪುಟ ಸಂಖ್ಯೆ | ಪ್ರಕಾಶಕರು | ವರ್ಷ | ಕ್ರಯ |
|---|---|---|---|---|---|---|
| ೧ | ನಿಸರ್ಗ | ಕಾದಂಬರಿ | ೩೬೮ | ಮನೋಹರ ಗ್ರಂ. ಮಾಲಾ, ಧಾರವಾಡ | ೧೯೪೫ | ೩.೫೦ ರೂ. |
| ೨ | ದತ್ತವಾಣಿ | ವಿಮರ್ಶೆ | ೧೦೬ | ,, | ೧೯೪೬ | ೧.೨೫ ರೂ. |
| ೩ | ಚಿನ್ಮಯ ಚಿಂತಾಮಣಿ | ಅಧ್ಯಾತ್ಮ | ೫೮ | ಶಾಂತಿ ಸೇವಾ ಸದನ, ಸೇಡಬಾಳ | ೧೯೪೬ | ೧.೦೦ ರೂ. |
| ೪ | ಲೇಖನಕಲೆ | ತಂತ್ರಗ್ರಂಥ | ೨೧೨ | ,, | ೧೯೪೭ | ೨.೨೫ ರೂ. |
| ೫ | ರಾಷ್ಟ್ರಪುರುಷ | ಕಾದಂಬರಿ | ೭೨೦ | ಮನೋಹರ ಗ್ರಂ. ಮಾಲಾ, ಧಾರವಾಡ | ೧೯೪೭ | ೭.೦೦ ರೂ. |
| ೬ | ದಶಭಕ್ತಿ | ಅಧ್ಯಾತ್ಮ | ೩೨೪ | ಶಾಂತಿ ಸೇವಾ ಸದನ, ಸೇಡಬಾಳ | ೧೯೪೭ | ೩.೦೦ ರೂ. |
| ೭ | ಪ್ರತಿಸರಕಾರ | ಕಾದಂಬರಿ | ೧೩೬ | ಲಲಿತ ಸಾಹಿತ್ಯ ಮಾಲೆ, ಧಾರವಾಡ | ೧೯೪೭ | ೧.೭೫ ರೂ. |
| ೮ | ರಾಮಣ್ಣ ಮಾಸ್ತರು | ಕಾದಂಬರಿ | ೧೭೮ | ಕಲ್ಪನಾ ಗ್ರಂಥ ಮಾಲಾ, ಹುಬ್ಬಳ್ಳಿ | ೧೯೪೮ | ೨.೦೦ ರೂ. |
| ೯ | ಅಶೋಕ ಚಕ್ರ | ಕಾದಂಬರಿ | ೨೯೨ | ಪ್ರತಿಭಾ ಗ್ರಂಥ ಮಾಲಾ, ಧಾರವಾಡ | ೧೯೪೮ | ೩.೫೦ ರೂ. |
| ೧೦ | ಪ್ರಣಯ ಸಮಾಧಿ | ಕಥಾ ಸಂಗ್ರಹ | ೯೩ | ,, | ೧೯೪೯ | ೧.೨೫ ರೂ. |
| ೧೧ | ಭಸ್ಮಾಸುರ | ಕಾದಂಬರಿ | ೧೪೨ | ಉಷಾ ಸಾಹಿತ್ಯ ಮಾಲೆ, ಮೈಸೂರು | ೧೯೪೯ | ೧.೫೦ ರೂ. |
| ೧೨ | ವಿಜಯಶ್ರೀ | ಕಥಾ ಸಂಗ್ರಹ | ೮೦ | ಶಾಂತಿ ಸೇವಾ ಸದನ, ಸೇಡಬಾಳ | ೧೯೫೦ | ೧.೦೦ ರೂ. |
| ೧೩ | ಭರತೇಶ ವೈಭವ ಶೋಭನ ಸಂಧಿಗಳು | ಕಾವ್ಯ | ೬೭ | ,, | ೧೯೫೧ | ೧.೦೦ ರೂ. |
| ೧೪ | ಜೈನಧರ್ಮ | ಪ್ರಬಂಧ | ೧೦೦೦ | ,, | ೧೯೫೨ | ೧೫.೦ ರೂ. |
| ೧೫ | ಮೂಲ ಶಿಕ್ಷಣ ಮೌಲ್ಯ ಮಾಪಣ | ಶೈಕ್ಷಣಿಕ | ೬೪ | ,, | ೧೯೫೪ | ·೭೫ ರೂ. |
| ೧೬ | ಶ್ರೇಯಾಂಸ | ಕಾದಂಬರಿ | ೬೩೮ | ವಾಹಿನಿ ಪ್ರಕಾಶನ, ಬೆಂಗಳೂರು | ೫೪,೫೫ | ೩.೦೦ ರೂ. |
| ೧೭ | ಭರತೇಶನ ನಾಲ್ಕು ಚಿತ್ರಗಳು | ವಿಮರ್ಶೆ | ೧೨೦ | ಶಾಂತಿ ಸೇವಾ ಸದನ, ಸೇಡಬಾಳ | ೧೯೫೪ | ೧·೨೫ ರೂ. |
| ೧೮ | ಶ್ರೀ ಶಾಂತಿ ಸಾಗರರು | ಚರಿತ್ರ | ೧೬ | ,, | ೧೯೫೪ | ·೨೫ ರೂ. |
| ೧೯ | ಸಮ್ರಾಟ್ ಶ್ರೇಣಿಕ | ಐತಿಹಾಸಿಕ ಕಾದಂಬರಿ | ೮೫ | ಅಜಿತ ಪ್ರಕಾಶನ, ಬೆಳಗಾಂವಿ | ೧೯೫೪ | ೧.೦೦ ರೂ. |
| ೨೦ | ಭಾರತೀಯ ಸಂಸ್ಕೃತಿಯ ಹೃದಯ | ಉಪನ್ಯಾಸ ಸಂಗ್ರಹ | ೧೨೦ | ಶಾಂತಿ ಸೇವಾ ಸದನ | ೧೯೫೫ | ೧·೫೦ ರೂ. |
| ೨೧ | ಭಾರತದ ಬೆಳಕು | ವ್ಯಕ್ತಿಚಿತ್ರ | ೯೪ | ,, | ೧೯೫೫ | ೧.೦೦ ರೂ. |
| ೨೨ | ಭಗವಾನ್ ಮಹಾವೀರ | ಚರಿತ್ರ | ೨೪ | ಸಮಾಜ ಶಿಕ್ಷಣ ಪ್ರಸಾರಕ ಗ್ರಂಥ ಮಾಲಾ, ಬೆಳಗಾಂವಿ | ೧೯೫೫ | ·೨೫ ರೂ. |
| ೨೩ | ಖಾರವೇಲ | ಚರಿತ್ರ | ೩೨ | ಬಾ. ಭು. ಗ್ರಂಥ ಪ್ರಕಾಶನ, ಸಾಂಗಲಿ | ೧೯೫೫ | ·೨೫ ರೂ. |
| ೨೪ | ಮುಹಮ್ಮದ ಪೈಗಂಬರ | ಚರಿತ್ರ | ೫೦ | ಸಮಾಜ ಶಿಕ್ಷಣ ಪ್ರಸಾರಕ ಗ್ರಂಥ ಮಾಲಾ, ಬೆಳಗಾಂವಿ | ೧೯೫೬ | ·೩೭ ರೂ. |
| ೨೫ | ಸಮಯಸಾರ | ಅಧ್ಯಾತ್ಮ | ೧೪೦ | ಶಾಂತಿ ಸೇವಾ ಸದನ, ಸೇಡಬಾಳ | ೧೯೫೬ | ೧·೫೦ ರೂ. |
| ೨೬ | ಬುದ್ಧನ ಕಥೆ | ವ್ಯಕ್ತಿಚಿತ್ರ | ೫೦ | ಪ್ರತಿಭಾ ಗ್ರಂಥ ಮಾಲೆ | ೧೯೫೬ | ·೬೦ ರೂ. |
| ೨೭ | ಮಹಾಪುರುಷ | ವ್ಯಕ್ತಿಚಿತ್ರ | ೧೫೮ | ವಿವೇಕಾಭ್ಯುದಯ ಕಾರ್ಯಾಲಯ, ಮಂಗಳೂರು | ೧೯೫೬ | ೨.೦೦ ರೂ. |
| ೨೮ | ತವನಿಧಿ | ನಾಡಕತೆ | ೨೦ | ಅಜಿತ ಪ್ರಕಾಶನ | ೧೯೫೭ | ·೨೫ ರೂ. |
| ೨೯ | ಭಾಷಾ ಶಿಕ್ಷಣ | ಶೈಕ್ಷಣಿಕ | ೧೦೩ | ಭಾರತ್ ಬುಕ್ ಡಿಪೋ, ಧಾರವಾಡ | ೧೯೫೭ | ೧·೫೦ ರೂ. |

## ಪ್ರಕಾಶನದ ಹೊಸ್ತಿಲಲ್ಲಿ

| | | | | | | |
|---|---|---|---|---|---|---|
| ೩೦ | ನಾನು ಕಂಡ ನಾಡು | ಪ್ರವಾಸ ಪ್ರಬಂಧ | ೧೫೦ | ಪ್ರತಿಭಾ ಗ್ರಂಥ ಮಾಲೆ | — | — |
| ೩೧ | ಕನ್ನೆಯರಿಗೆ | ಸಣ್ಣ ಕಥಾ ಸಂಕಲನ | ೧೨೦ | — | — | — |
| ೩೨ | ಭಾರತೀಯ ಸಂಸ್ಕೃತಿಯ ವಿಕಾಸ | ಪ್ರಬಂಧ | ೧೦೦೦ | — | — | — |

# II. ಲೇಖನಗಳ ಅಕಾರಾದಿ

೧. ಅಕ್ಕಾಜಿ (ಶರಶ್ಚಂದ್ರರ 'ಬಡದಿದಿ'ಯ ವಿಮರ್ಶೆ) 'ಜೀವನ' ಎಪ್ರೀಲ ೧೯೪೩.
೨. ಇತಿಹಾಸಜ್ಞಾನದಲ್ಲಿ ಭಾರತೀಯರ ಸ್ಥಾನ, 'ಜಯಂತಿ' ಮೇ ೧೯೪೦.
೩. ಇಂದಿನ ಶಿಕ್ಷಣದ ಒಲವು-ನಿಲುವು, 'ಉಷಾ' ವಾರ್ಷಿಕ ಸಂಚಿಕೆ '೪೯.
೪. ಕನ್ನಡಸಾಹಿತ್ಯದಲ್ಲಿ ಜೈನಯುಗ, 'ಜಯಕರ್ನಾಟಕ' ಜೂನ, ಜುಲೈ, ಅಗಷ್ಟ ೧೯೪೬.
೫. ಕರ್ನಾಟಕಕ್ಕೆ ಜೈನಮತದ ಕೊಡುಗೆ, 'ವಿವೇಕಾಭ್ಯುದಯ' ಫೆಬ್ರುವರಿ ೧೯೫೬.
೬. ಕರ್ನಾಟಕಾಚಾ ಇತಿಹಾಸ (ಮರಾಠಿ), 'ಸನ್ಮತಿ' ಜಾನೆವರಿ ೧೯೫೩.
೭. ಕನ್ನಡ ಕಾದಂಬರಿಗಳ ಚಿರಂತನತ್ವ, 'ಜಯಂತಿ' ೧೯೫೦.
೮. ಕವಿಯ ಕರ್ಮ ಕಮ್ಮಟಿ, 'ಜನತಾ' ಅಗಷ್ಟ ೧೯೪೭.
೯. ಕರ್ಮ ವಿಮೂಮಾಂಸೆ, 'ಸುಬೋಧ' ಅಕ್ಟೋಬರ ೧೯೪೮.
೧೦. ಕನ್ನಡಿಗರ ಇಂದಿನ ಕಾರ್ಯ, 'ಪ್ರಕಾಶ' ಜಾನೆವರಿ ೧೯೪೮.
೧೧. ಕರ್ನಾಟಕದ ಉತ್ತರ ಸೀಮೆಯ ಸ್ಥಿತಿ-ಗತಿ, 'ಜೀವನ' ಅಗಷ್ಟ '೫೩.
೧೨. ಕತೆಗಾರ ಕೃಷ್ಣಶಾಸ್ತ್ರಿಗಳ ಒಲವು, 'ಜೀವನ' ನವ್ಹಂಬರ ೧೯೫೨.
೧೩. ಕನ್ನಡಿಗರ ಸಮನ್ವಯದೃಷ್ಟಿ, 'ಜಯಕರ್ನಾಟಕ' ನವ್ಹಂಬರ ೧೯೫೬.
೧೪. ಕನ್ನಡ ಸಾಹಿತ್ಯ ಚರಿತ್ರೆ (ವಿಮರ್ಶೆ), 'ಜಯಂತಿ' ಫೆಬ್ರುವರಿ ೧೯೫೪.
೧೫. ಕನ್ನಡ ಸಾಹಿತ್ಯಮೆ ಜೈನ ಸಾಹಿತ್ಯಕಾರೋಂಕಾ ಸ್ಥಾನ, ಬ್ರ. ಪಂ. ಚಂದಾಬಾಯಿ ಅಭಿನಂದನ ಗ್ರಂಥ ೧೯೫೪.
೧೬. ಕಾರ್ಕಳದ ಗೋಮಟೇಶ, 'ಸನ್ಮತಿ' ಜಾನೇವರಿ ೧೯೫೭.
೧೭. ಜನಪದ ಜೀವನ (ವಿಮರ್ಶೆ), 'ಜಯಂತಿ' ಮಾರ್ಚ ೧೯೫೬.
೧೮. ಜನಸಂಖ್ಯೆಯ ಸಮಸ್ಯೆ (ಆರ್ಥಿಕ ವಿಚಾರ), 'ಜಯಂತಿ' ಅಕ್ಟೋ.'೪೯.
೧೯. ಜಪಾನಿನ ಜನಜೀವನ (ಪರಿಚಯಾತ್ಮಕ), 'ಜಯಂತಿ' ಜಾನೆವರಿ '೪೫.
೨೦. ಜಗಳದ ಜೋಳ (ಏಕಾಂಕನಾಟಕ), 'ಸುಬೋಧ' ನವಂ. ಡಿಸೆಂ.'೫೦.
೨೧. ಜಗತ್ತು ಮತ್ತು ಹಿಂದುಸ್ಥಾನ, 'ಸಮಾಜ' ೧೯೪೮.
೨೨. ಜಾನಪದ ಗೀತಗಳು, 'ಜೀವನ' ಸಪ್ಟಂಬರ '೪೧; ಜೂನ '೪೪.
೨೩. ಜಿನಸೇನಾಚಾರ್ಯರು ಇಬ್ಬರಿದ್ದರು, 'ವಿವೇಕಾಭ್ಯುದಯ' ಎಪ್ರೀಲ ೧೯೫೧

೨೪. ಜೀವನ ಶಿಕ್ಷಣದ ಪ್ರಜ್ಞೆ, 'ಜೀವನ ಶಿಕ್ಷಣ' ಸಪ್ಟಂಬರ ೧೯೫೬.
೨೫. ಜೀವನ್ಮುಕ್ತಿ, 'ಸುಬೋಧ' ಅಗಷ್ಟ ೧೯೪೮.
೨೬. ಜೀವನದಲ್ಲಿ ದರ್ಶನೋದಯ, 'ಆದರ್ಶ' ಜೂನ ೧೯೪೮.
೨೭. ಜೀವನದ ಚತುಃಸೂತ್ರಗಳು, 'ಜಿನವಿಜಯ' ನವಂ , ಡಿಸೆಂ. ೧೯೫೩.
೨೮. ಜೈನಧರ್ಮ (ಮರಾಠಿ), 'ಸನ್ಮತಿ' ಮಾರ್ಚ ೧೯೫೩.
೨೯. ಜೈನ ಶಿಲ್ಪಕಲೆ, 'ಜಿನವಿಜಯ' ಅಕ್ಟೋಬರ, ನವ್ಹಂಬರ ೧೯೫೧.
೩೦. ತರಂಗಿಣಿ (ವಿಮರ್ಶೆ), 'ಸುಕುಮಾರ'
೩೧. ತೊರವೆ ರಾಮಾಯಣ ಸಂಗ್ರಹ (ವಿಮರ್ಶೆ), 'ಜೀವನ' ಮೇ '೪೨.
೩೨. ದಕ್ಷಿಣ ಭಾರತದಲ್ಲಿ ಜೈನಧರ್ಮ,'ಜಿನವಿಜಯ' ಫೆಬ್ರು.,ಮಾರ್ಚ'೫೩.
೩೩. ದಿವಾಕರರ ಅಂತರಾತ್ಮನೊಡನೆ, 'ಜೀವನ' ಅಗಷ್ಟ ೧೯೫೫.
೩೪. ಧರ್ಮಸ್ಥಳದಿಂದ ವೈನಾಡಿಗೆ, 'ಜಿನವಿಜಯ' ಮಾರ್ಚ ೧೯೫೫.
೩೫. ಧರ್ಮದ ಸ್ವರೂಪ ಮತ್ತು ಅವಶ್ಯಕತೆ, 'ಗುರುದೇವ' ಎಪ್ರೇಲ '೫೭.
೩೬. ಧರ್ಮ ಮತ್ತು ವಿಶ್ವಸಮಸ್ಯೆ, 'ಗುರುದೇವ' ಫೆಬ್ರುವರಿ ೧೯೫೭.
೩೭. ದೇವನೊಡನೆ (ಬಾಳ್ನೋಟ), 'ಜಯಂತಿ' ಫೆಬ್ರುವರಿ ೧೯೪೭.
೩೮. ನವಯುಗದಲ್ಲಿ ನಮ್ಮ ದೃಷ್ಟಿ, 'ನವಯುಗ' ಹುಬ್ಬಳ್ಳಿ, ಅಗಷ್ಟ '೫೨.
೩೯. ನಾನು ಕಂಡ ಹೆಗ್ಗಡೆಯವರು, ಸಮರ್ಪಣ ಗ್ರಂಥ.
೪೦. ಪ್ರಜಾಪ್ರಭುತ್ವದಲ್ಲಿ ಪ್ರಜೆಗಳ ಪಾತ್ರ, 'ಜೀವನ ಪ್ರಕಾಶ' ಅಗಷ್ಟ '೫೩.
೪೧. ಪಯಣದ ಹಾದಿಯಲ್ಲಿ (ವಿಮರ್ಶೆ), 'ಜಯಂತಿ' ಸಪ್ಟಂಬರ '೪೭.
೪೨. ಪಾಕಿಸ್ತಾನದ ಸ್ವರೂಪವೇನು? (ಪರಿಚಯಾತ್ಮಕ), 'ಜಯಂತಿ' ಮೇ ೧೯೪೨.
೪೩. ಬಿಡುಗಡೆಯ ಬೇಡಿಕೆ, 'ಪ್ರಕಾಶ' ನವ್ಹಂಬರ ೧೯೪೭.
೪೪. ಭರತೇಶ ವೈಭವ ಶೋಭನಸಂಧಿಗಳು, 'ಜೀವನ' ಫೆಬ್ರುವರಿ ೧೯೪೫.
೪೫. ಭ. ವೈ. ಶೋಭನ ಸಂಧಿಗಳ ಸೌಂದರ್ಯ ಸೃಷ್ಟಿ, 'ವಿವೇಕಾಭ್ಯುದಯ' ಎಪ್ರೇಲ ೫೨.
೪೬. ಭಗವಾನ್ ಗುಣಭದ್ರರ ಭಾವಚಿತ್ರ, 'ಜಿನವಿಜಯ' ಸಪ್ಟಂಬರ ೧೯೫೩.
೪೭. ಭ. ಬುದ್ಧ ಮತ್ತು ಮಹಾವೀರ, 'ಪ್ರದೀಪ' ಜೂನ ೧೯೫೬.
೪೮. ಭಾರತೀಯರ ಬಾಳಿನಲ್ಲಿ ಬುದ್ಧಿಯ ಬೆಳಕು, 'ಜಯಂತಿ' ಜುಲೈ '೪೪.
೪೯. ಭಾರತದ ಆರ್ಥಿಕ ಯೋಜನೆಗಳೂ ಸರ್ ವಿಶ್ವೇಶ್ವರಯ್ಯನವರೂ, 'ಜೀವನ' ಸಪ್ಟಂಬರ ೧೯೫೧.

೫೦ ಭಾರತ ಬ್ರಿಟನ್ನುಗಳ ಸಂಬಂಧ, 'ಆದರ್ಶ' ೧೯೪೬.

೫೧. ಭಾಷಾವಾರು ಪ್ರಾಂತರಚನೆ ಹಾಗು ಭಾರತ ಸರಕಾರದ ಬಲ, 'ಆದರ್ಶ' ಫೆಬ್ರುವರಿ ೧೯೪೯.

೫೨. ಭಾರತೀಯರು-ನಾವು-ಸ್ವಾತಂತ್ರ್ಯರಾಗಿದ್ದೇವೆಯೆ?, 'ದೇಶಬಂಧು' ೧೫—೮—೧೯೪೮.

೫೩. ಭಾರತೀಯ ಸಂಸ್ಕೃತಿಯ ವಿಕಾಸ, ಡಿ. ಮುಳಿಯ ತಿಮ್ಮಪ್ಪಯ್ಯನವರ "ಶ್ರದ್ಧಾಂಜಲಿ" ಗ್ರಂಥ.

೫೪ ಭಾರತೀಯ ಸಂಸ್ಕೃತಿಗೆ ಜೈನಧರ್ಮದ ನೆರವು, 'ಜಿನವಿಜಯ' ಜುಲೈ ೧೯೫೧.

೫೫. ಮಗಳ ಮದುವೆ (ವಿಮರ್ಶೆ), 'ಜಯಂತಿ' ಡಿಸೆಂಬರ ೧೯೫೨.

೫೬. ಮಕ್ಕಳ ಕಥೆಗಳು (ಜಾನಪದ ದೃಷ್ಟಿಯಲ್ಲಿ), 'ಜಯಂತಿ' ನವ್ಹಂ. '೫೧.

೫೭. ಮಹಾದೇವ ಭಾಯಿಯವರ ದಿನಚರಿ (ವಿಮರ್ಶೆ), 'ಜಯಂತಿ' ಜಾನೆವರಿ ೧೯೫೪

೫೮. ಮೃತ್ಯುವಿನಿಂದ ಮುಕ್ತಿಗೆ, 'ಪ್ರದೀಪ' ಡಿಸೆಂಬರ ೧೯೫೬.

೫೯. ಮಾನವ ಜೀವನದ ಮಹತಿಯೆಲ್ಲಿ?, 'ಜೀವನ' ಜುಲೈ ೧೯೪೨.

೬೦. ಮುಂಬೈ ಕರ್ನಾಟಕದ ಜೈನರ ಸ್ಥಿತಿ-ಗತಿ, 'ವಿವೇಕಾಭ್ಯುದಯ' ನವ್ಹಂಬರ ೧೯೫೬.

೬೧. ಮೂಲೋದ್ಯಮದಿಂದ ಜೀವನ ಶಿಕ್ಷಣ, 'ಪ್ರಾಥಮಿಕ ಶಿಕ್ಷಣ' ನವ್ಹಂಬರ ೧೯೫೫.

೬೨. ಮೋಡಗಳು (ವಿಮರ್ಶೆ), 'ಜೀವನ' ಅಕ್ಟೋಬರ ೧೯೪೩.

೬೩. ಯುಗಧರ್ಮ ಮತ್ತು ಜೀವನನಿಷ್ಠೆ, 'ಯುಗಪುರುಷ' ಅಕ್ಟೊ. '೫೬.

೬೪. ರಾಷ್ಟ್ರಗೀತೆಗಳು, 'ಆದರ್ಶ' ಅಕ್ಟೋಬರ ೧೯೪೮.

೬೫. ರುಗ್ಣಶಯ್ಯೆಯಲ್ಲಿ (ಕವನ), 'ಜಯಂತಿ' ಮೇ ೧೯೪೪.

೬೬. ವ್ರತಕ್ಕೆ ನೋತ ವನುಭೂತಿ, 'ಜಿನವಿಜಯ' ನವ್ಹಂಬರ ೧೯೫೪.

೬೭. ಪ್ರಾಚ್ಯ ಸಂಸ್ಕೃತಿಯ ವಿಕಾಸ, 'ಪ್ರದೀಪ' ಅಗಸ್ಟ ೧೯೫೬.

೬೮. ವಿಮರ್ಶಕನಾರು?, 'ಜೀವನ' ಎಪ್ರೇಲ ೧೯೪೩.

೬೯. ವಿಮರ್ಶೆಯ ವಿಧಾನ, 'ಆದರ್ಶ' ಜುಲೈ ೧೯೪೮.

೭೦. ವಿಶ್ವಶಾಂತಿಯ ಮಾರ್ಗದಲ್ಲಿ, 'ಜಯಕರ್ನಾಟಕ' ೧೯೪೭,

೭೧. ಶಿಕ್ಷಣದಲ್ಲಿ ಶಿಕ್ಷಕನ ಪಾತ್ರ, 'ಶಿಕ್ಷಕ ಶಿಕ್ಷಣ ದರ್ಶನ' ಗ್ರಂಥ.

೭೨. ಶುದ್ಧ ಬರಹ, 'ಜೀವನ' ಜೂನ ೧೯೪೧.
೭೩. ಶ್ರೀ. ಮುಗಳಿಯವರ ಕಾವ್ಯಜೀವನ (ಬಾಸಿಗದಿಂದ), 'ಕನ್ನಡ ನುಡಿ' ಸಪ್ಟಂಬರ ೧-೮-೧೯೪೪.
೭೪. ಶ್ರೀ. ದಿಕ್ಷಿತ ನರಸಿಂಹರಾಯರು, ಅವರ 'ಅಭಿನಂದನ' ಗ್ರಂಥ.
೭೫. ಶ್ರೀ. ನೇಮಿಸಾಗರ ವರ್ಣಜಿಯವರೊಡನೆ, 'ಅಭಿನಂದನ' ಗ್ರಂಥ.
೭೬. ಶ್ರೀ. ಲಠ್ಠೆಯವರೊಡನೆ, 'ಜಿನವಿಜಯ' ಜಾನೆವರಿ '೫೧; 'ಜಯಂತಿ' ೧೯೫೦.
೭೭. ಶ್ರೀ. ಲಕ್ಷ್ಮೀಸೇನರ ಸಹವಾಸದಲ್ಲಿ, 'ಜಿನವಿಜಯ' ಜೂನ ೧೯೫೩.
೭೮. ಶ್ರೀ. ಡಾಯರೆಕ್ಟರ ಪಾವಟೆಯವರು, 'ಪ್ರಾಥಮಿಕ ಶಿಕ್ಷಣ' ೧೯೪೮.
೭೯. ಶ್ರೀ. ಆಚಾರ್ಯ ಶಾಂತಿಸಾಗರರು, 'ಜಯಂತಿ' ಡಿಸೆಂಬರ ೧೯೫೨; ಜಾನೆವರಿ ೧೯೫೩.
೮೦. ಶ್ರೀ. ಮಗನಲಾಲ ಶಹಾ, 'ಜಿನವಿಜಯ' ಜೂನ ೧೯೫೧.
೮೧. ಶ್ರೀ. ಡಿ. ಪುಟ್ಟಸ್ವಾಮಿಯವರೊಡನೆ, 'ಜಿನವಿಜಯ' ಅಗಷ್ಟ ೧೯೫೧.
೮೨. ಶ್ರೀ. ಪಿ. ಎಚ್. ಗುಂಜಳ, 'ಜಿನವಿಜಯ' ಜುಲೈ ೧೯೫೧.
೮೩. ಶ್ರೀ. ದಿವಾಣ ಬಹಾದ್ದೂರ ಚೌಗುಲೆಯವರು, 'ಜಿನವಿಜಯ' ಜುಲೈ ೧೯೫೨.
೮೪. ಶ್ರೀ. ವಿಲಾಸ ಸಂಗವೆಯವರ ಸಂದರ್ಶನ, 'ಜಿನವಿಜಯ' ಮಾರ್ಚ ೧೯೫೨.
೮೫. ಶ್ರೀ. ರಾಯಪ್ಪಣ್ಣ ವತ್ರಾವಳಿಯವರು, 'ಜಿನವಿಜಯ' ಮೇ ೧೯೫೧.
೮೬. ಶ್ರೀರಾಮಾಯಣ ದರ್ಶನಂ (ರಸವಿಮರ್ಶೆ), 'ಪ್ರಬುದ್ಧ ಕರ್ಣಾಟಕ' ಚೈತ್ರ ೧೯೫೭.
೮೭. ಸಮರ-ಶಾಂತಿ (ಕವನ), 'ಜಯಂತಿ' ಜೂನ ೧೯೪೧.
೮೮. ಸೃಷ್ಟಿಯಲ್ಲಿ ಶಿವಾನುಭವ (ಶಬರಶಂಕರ ವಿಲಾಸದಿಂದ), 'ಜಯ ಕರ್ನಾಟಕ' ಎಪ್ರೇಲ ೧೯೪೪.
೮೯. ಸಂಸ್ಥಾನಗಳ ಲೀನೀಕರಣ ಮತ್ತು ಏಕೀಕರಣ, 'ಆದರ್ಶ' ಎಪ್ರೇಲ ೧೯೪೮.
೯೦. ಸ್ವರಾಜ್ಯ ಸ್ಥಾಪನೆಗೆ ಸುವರ್ಣ ಸಮಯ, 'ಆದರ್ಶ' ಅಗಷ್ಟ ೧೯೪೮.
೯೧. ಸ್ವತಂತ್ರ ಭಾರತದ ರಾಷ್ಟ್ರಧ್ವಜ, 'ದೇಶಬಂಧು' ೧೫-೮-೧೯೪೭.

೯೨. ಸಾರ್ಥಕ ಸಾಹಿತ್ಯ, 'ಜೀವನ' ಜುಲೈ ೧೯೪೧.
೯೩. ಸಾಹಿತ್ಯದ ಶ್ರೇಯ, 'ಯುಗಪುರುಷ' ಜುಲೈ ೧೯೪೧.
೯೪. ಸಿಂಧುವಿನಿಂದ ಶ್ರವಣಬೆಳ್ಗೊಳ, 'ಪ್ರದೀಪ' ನವ್ಹಂಬರ ೧೯೩೬.
೯೫. ನೇಡಬಾಳ (ಕನ್ನಡ ಕೋಟೆ), 'ಜೀವನ' ಅಗಷ್ಟ ೧೯೪೦.
೯೬. ಸಂಪಾದಕೀಯ ಲೇಖನಗಳು, 'ಜಿನವಿಜಯ' ೧೯೩೪.
(ಅ) ಮಹಾಪುರುಷರ ಹುಟ್ಟುಹಬ್ಬಗಳು (ಎಪ್ರೀಲ).
(ಆ) ಜೈನಸಮಾಜ ವಿಚಾರಿಸುವುದೇ? (ಮೇ).
(ಇ) ನಾಡಿನ ಯುವಕರು (ಜೂನ).
(ಈ) ಪಠ್ಯಪುಸ್ತಕಗಳಲ್ಲಿ ಜೈನಧರ್ಮ (ಜುಲೈ).
(ಉ) ಜೀವದಯೆ ಮತ್ತು ಸರಕಾರ (ಅಗಷ್ಟ).
(ಊ) ಧಾರ್ಮಿಕ ಪತ್ರಿಕೆಗಳ ದೃಷ್ಟಿಕೋಣ (ಸಪ್ಟಂಬರ).
(ಎ) ಮಹಾವೀರ ನಿರ್ವಾಣ (ಅಕ್ಟೋಬರ).
(ಏ) ನಮ್ಮ ಜವಹರರು (ನವ್ಹಂಬರ).
(ಐ) ಸರ್ವಧರ್ಮ ಸಮ್ಮೇಲನಗಳು (ಡಿಸೆಂಬರ).
೯೭. ಹಳ್ಳಿಗರ ಸಾಹಿತ್ಯದಲ್ಲಿಯ ಒಂದು ರಸಪರ್ವ (ಹೊಲಗೆಲಸದ ಹಾಡುಗಳು), 'ಜಯಂತಿ' ಫೆಬ್ರುವರಿ ೧೯೫೫.
೯೮. ಹಿಂದಿನ – ಇಂದಿನ – ಮುಂದಿನ ಸಾಹಿತ್ಯ, 'ಜಿನವಿಜಯ' ಮಾರ್ಚ ೧೯೩೨.
೯೯. ಹಳ್ಳಿಯ ಪದಗಳು (ವಿಮರ್ಶೆ), 'ಜೀವನ' ಜಾನೇವರಿ ೧೯೪೨.
೧೦೦. ಹನ್ನೆರಡು ಭಾವಗೀತೆಗಳು (ವಿವಿಧ ಪತ್ರಿಕೆಗಳಲ್ಲಿ ಪ್ರಕಟಿತ), ಬೆಳ್ಳಿಚಿಕ್ಕೆ; ನೆನಪಿರಲಿ; ಗಿಳಿಯಿಂದ; ಜೋಗದರ್ಶನ; ಬೆಳ್ಗೊಳದ ಗೊಮ್ಮಟೇಶ; ಸಮರ್ಥರು; ಲಕ್ಷ್ಮಿಗೆ; ನನ್ನ ನೌಕೆ; ಮುಗಿಲರಸಿ; ಶರದ ಸೃಷ್ಟಿಯಲ್ಲಿ; ಮಹಾತ್ಮರ ಹುಟ್ಟುಹಬ್ಬದಲ್ಲಿ; ಶುಭ ನುಡಿಯೆ ಶಕುನವಕ್ಕಿ!

## ಪ್ರಕಾಶನದ ಹೊಸ್ತಿಲಲ್ಲಿ

೧೦೧. ಸಂಸ್ಕೃತಿ ಸಂಗಮ, 'ರಾಮರಾಜ್ಯ' ಬೆಂಗಳೂರು.
೧೦೨. ಜೈನಸಂಸ್ಕೃತಿಯ ಸಂರಕ್ಷಣೆ, 'ವಿವೇಕಾಭ್ಯುದಯ' ಮಂಗಳೂರು.

# "ವಿವೇಕಾಭ್ಯುದಯ"

ಮಾನವ ಜೀವಿಯು ರಾಗ-ದ್ವೇಷ-ಮೋಹಗಳಿಂದ ಮುಕ್ತನಾದಾಗ ಪರಮಾತ್ಮನಾಗುವನು, ಅರಿಹಂತನಾಗುವನು, ಮಹಾಮಾನವನಾಗುವನು. ಪಶುಪಕ್ಷ್ಯಾದಿ ಪರ್ಯಾಯಗಳಿಂದ ಮಾನವತೆಯು ಪ್ರಕೃತಿಯಲ್ಲಿ ಉದಯಿಸಲಿಕ್ಕೆ ನಿರಿಚ್ಛೆಯಿಂದ ಬಾಳಿದಾಗ ಲಕ್ಷಾವಧಿ ವರ್ಷಗಳು ಸಂದುವು. ಈಗ ಮಾನವನು ಬುದ್ಧಿ ಭಾವಗಳುಳ್ಳ ಇಚ್ಛಾಪ್ರಧಾನ ಜೀವಿಯು. ಇಂಥ ಅವಸ್ಥೆಗೆ ಮುಟ್ಟಿದ ನರನು ಬುದ್ಧಿಪೂರ್ವಕವಾಗಿ ಯತ್ನಿಸಿದಲ್ಲಿ ಮಹಾಮಾನವತೆಯು ಲೋಕದಲ್ಲಿ ರೂಪುಗೊಳ್ಳಲಿಕ್ಕೆ ಹೆಚ್ಚು ದಿನಗಳು ಬೇಕಾಗಲಿಕ್ಕಿಲ್ಲ. ಇದಕ್ಕೆ ಮಾನವನಲ್ಲಿಯು ವಿವೇಕವು ಜಾಗೃತವಾಗಲಿಕ್ಕೆ ಬೇಕು. ಲೋಕದಲ್ಲಿ ವಿವೇಕಾಭ್ಯುದಯವಾಗಲಿಕ್ಕೆ ಬೇಕು. ಇದನ್ನರಿತುಕೊಂಡೇ ಇಪ್ಪತ್ತೈದು ವರ್ಷಗಳ ಹಿಂದೆ "ವಿವೇಕಾಭ್ಯುದಯ"ದ ಉದಯವಾಯಿತು. ಅಗಮಿಕ-ಅಧುನಿಕ ದೃಷ್ಟಿಕೋಣಗಳೆರಡನ್ನೂ ಸಮನ್ವಯಗೊಳಿಸಿಕೊಂಡು ಈ ಪತ್ರಿಕೆಯು ಮುಂದೆಸಾಗುತ್ತಿದೆ.

ಇಂಥ ಒಂದು ವಿಶ್ವಮಾನವತೆಯನ್ನು ರೂಪಿಸುವ ವಿವೇಕಾಭ್ಯುದಯದ ಕಾರ್ಯವು ಮಹತ್ತರವಾದುದು. ಅದನ್ನು ನಿರ್ವಹಿಸುವಂಥ ಸ್ಥಿರವಾದ ಸಂಸ್ಥೆಯೊಂದನ್ನು ಕಟ್ಟಲು ಸಂಪಾದಕರು ಹೆಣಗುತ್ತಲಿದ್ದಾರೆ. ಅದನ್ನು "ವಿವೇಕಾಭ್ಯುದಯ"ದ ಈ ರಜತೋತ್ಸವದ ವರ್ಷದಲ್ಲಿ ನಿರ್ಮಿಸುವುದು ನಾಡಿನ ಜನರೆಲ್ಲರ ಕರ್ತವ್ಯವಾಗಿದೆ.